Basava Bodhamrita




॥ಓಂ॥

# ಬಸವ ಬೋಧಾಮೃತ.



ಹರ್ಡೇಕರ್ ಮಂಜಪ್ಪನವರು.

ವೀರಶೈವ ವಿದ್ಯಾಲಯ ಗ್ರಂಥ ಮಾಲಿ ಸಂಖ್ಯೆ ೧೫.



|| ಓಂ ||

# ಬಸವ ಬೋಧಾಮೃತ.



ಲೇಖಕರು:-

ಶ್ರೀ ಹರ್ಡೇಕರ್ ಮಂಜಪ್ಪನವರು.

೩ನೆಯ ಆವೃತ್ತಿ ೧೦೦೦ ಪ್ರತಿಗಳು.





ಶಕೆ ೧೮೫೭ ] ಕ್ರಯ ೬ ಆಣೆ. [ ಕ್ರಿ. ಶಕೆ ೧೯೩೫

# ಪೀಠಿಕೆ.

---

ಶ್ರೀ ಬಸವಣ್ಣನವರ ವಚನಗಳಲ್ಲಿ ೯೫೬ ವಚನಗಳೇ ವಿಶೇಷವಾಗಿ ನಮ್ಮ ಪರಿಚಯದಲ್ಲಿವೆಯಷ್ಟೆ. ಅವುಗಳಲ್ಲಿಯ ೧೦೮ ವಚನಗಳನ್ನು ಮಾತ್ರ ಈ ಚಿಕ್ಕ ಪುಸ್ತಕದಲ್ಲಿ ಅರ್ಥದೊಂದಿಗೆ ವಿವರಿಸಿದ್ದಾಗಿದೆ. ಶಿವಾನುಭವಿಗಳು ಮತ್ತು ವೀರಶೈವ ಮತಪ್ರವೀಣರು ಈ ವಚನಗಳಿಗೆ ಅರ್ಥವನ್ನು ಅನೇಕ ರೀತಿಗಳಿಂದ ಎಷ್ಟೋ ವಿಸ್ತಾರವಾಗಿ ಹೇಳಬಹುದು. ಏಕೆಂದರೆ, ಈ ವಚನಗಳು ಅಷ್ಟು ಅರ್ಥ ಗರ್ಭಿತವಾದವುಗಳಾಗಿಯೇ ಇವೆ.

ವಚನಶಾಸ್ತ್ರ ವಿಶಾರದರಾದ ಬಾಗಲಕೋಟೆ ಶ್ರೀಯುತ ಕಿಣಗಿ ಬಸವಲಿಂಗಪ್ಪಣ್ಣನವರು ಅನೇಕ ವಚನಗಳ ಅರ್ಥವನ್ನು ವಿವರಿಸಿ ಹೇಳಿ, ಈ ನನ್ನ ಅಲ್ಪ ಪ್ರಯತ್ನಕ್ಕೆ ಕಾರಣರಾದುದರಿಂದ ಅವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಮಹಾನುಭಾವರಾದ **ಬಸವಣ್ಣನವರ** ವಿಷಯದಲ್ಲಿ ವೀರಶೈವರಿಗಂತೂ ಅಸಾಧಾರಣವಾದ ಪೂಜ್ಯಬುದ್ಧಿ ಇರುವುದರಿಂದ ಲಕ್ಷಾಂತರ ವೀರಶೈವರು ಪ್ರತಿನಿತ್ಯ ಅವರ ಧ್ಯಾನವನ್ನು ಮಾಡುತ್ತಿದ್ದಾರಷ್ಟೆ. ಆ ಮಹಾಶಯರೆಲ್ಲರೂ ಈ ನೂರೆಂಟು ವಚನಗಳನ್ನು ಪ್ರತಿನಿತ್ಯ ಪಾರಾಯಣ ಮಾಡುವ ರೂಢಿಯನ್ನಿಟ್ಟುಕೊಂಡರೆ ಆ ಮಹಾತ್ಮರ ಅದ್ವಿತೀಯವಾದ ಉಪದೇಶವು ಕತ್ತಲಲ್ಲಿ ದಾರಿ ತಪ್ಪಿ ತಿರುಗುತ್ತಿರುವವರಿಗೆ ದಿವ್ಯ ಪ್ರಕಾಶ ದೊರೆತಂತಾಗುವುದರಲ್ಲಿ ಸಂದೇಹವಿಲ್ಲ. ಇಂತಹ ಸುಸಮಯವು ಜಾಗ್ರತೆ ಪ್ರಾಪ್ತವಾಗಲಿ.

**ವೀರಶೈವ ವಿದ್ಯಾಲಯ,**
**ಆಲಮಟ್ಟಿ. ತಾ. ೫-೫-೩೫.**

**ಹರ್ಡೇಕರ್ ಮಂಜಪ್ಪ.**

||ಓಂ||

# ಶ್ರೀ ಬಸವ ಬೋಧಾಮೃತ.



ಮಹಾನುಭಾವರಾದ

## ಶ್ರೀ ಬಸವಣ್ಣನವರ ನೂರೆಂಟು ವಚನಗಳು.



## ೧ನೆಯ ಅಧ್ಯಾಯ.

**(೧) ಉದಕದೊಳಗೆ ಬಚ್ಚಿಟ್ಟ ಬಯಕೆಯ ಕಿಚ್ಚಿನಂತಿದ್ದೀತು| ಶಶಿಯೊಳಗಣ ರಸದ ರುಚಿಯಂತಿದ್ದೀತು| ನನೆಯೊಳಗಣ ಪರಿಮಳದಂತಿದ್ದೀತು| ಕೂಡಲ ಸಂಗಮದೇವ ನಿಮ್ಮ ನಿಲವು ಕನ್ಯೆಯ ಸ್ನೇಹದಂತಿದ್ದೀತು||** ಭಕ್ತಿ ಸ್ಥಳ ೧.

**ವಿವರಣೆ**— ಈ ವಿಶ್ವವನ್ನು ನಿಯಂತ್ರಣಗೊಳಿಸುತ್ತಿರುವ ಶ್ರೇಷ್ಠತರವಾದ ಒಂದು ಚೈತನ್ಯವುಂಟೆಂಬುದು ಪ್ರಾಯಶ: ಸಕಲರಿಗೂ ಮಾನ್ಯವಾದ ಸಂಗತಿಯೇ ಆಗಿದೆ. ಆ ಚೈತನ್ಯಕ್ಕೇನೇ ದೇವರೆಂದು ತಿಳಿದು ಬೇರೆ ಬೇರೆ ಹೆಸರುಗಳನ್ನಿಟ್ಟುಕೊಂಡಿದ್ದಾರೆ. ಆ ದೇವರು ಈ ಮನುಷ್ಯ ದೇಹದಲ್ಲಿಯೂ ಇದ್ದಾನೆಂದು ಸಕಲ ಆಸ್ತಿಕರೂ ನಂಬಿರುವದರಿಂದ ಅವರನ್ನು ಕುರಿತು ಈ ಪಿಂಡದಲ್ಲಿ ಆ ಪರಬ್ರಹ್ಮವು ಹೇಗಿದೆಯೆಂಬುದನ್ನು ಈ ವಚನದಲ್ಲಿ ನಾಲ್ಕು ಉಪಮೆಗಳಿಂದ ವಿವರಿಸಿದ್ದಾರೆ.

“ಸಮುದ್ರ ಮಧ್ಯದಲ್ಲಿರುವ ವಡವಾಗ್ನಿಯು ಸಮುದ್ರವನ್ನು ಸುಡದೆ ಅಥವಾ ಅದರಿಂದ ತಾನು ನೊಂದಿಹೋಗದೆ ಪ್ರಳಯಕಾಲದಲ್ಲಿರಬೇಕೆಂದು ನೀರಿನ ಸಂಗಡ ಹೇಗೆ ಕೂಡಿಕೊಂಡಿರುತ್ತದೆಯೋ, ಹಾಗೆಯೇ ಜಲಬುದ್ಬುದಮಯವಾದ ಪಿಂಡದಲ್ಲಿ ಅಗ್ನಿ ಸ್ವರೂಪನಾದ ಪರಮಾತ್ಮನು ಜೀವಾತ್ಮನಿಗೆ ಜ್ಞಾನೋದಯವಾಗುವವರೆಗೂ ಗೌಪ್ಯವಾಗಿರುತ್ತಾನೆ. ಚಂದ್ರನ ಕಲೆಯಲ್ಲಿ ಅಮೃತ ಕಿರಣವು ಹೇಗೆ ಅಡಕವಾಗಿರುತ್ತದೆಯೋ ಹಾಗೆಯೇ ಈ ಪಿಂಡವೆಂಬ

ಚಂದ್ರನಲ್ಲಿ ಪರಮಾತ್ಮನೆಂಬ ಅಮೃತ ಕಿರಣವು ಅಡಕವಾಗಿದೆ. ಹೂವಿನ ಪರಿಮಳವು ಮೊಗ್ಗೆಯಲ್ಲಿ ಹೇಗೆ ಗುಪ್ತವಾಗಿರುತ್ತದೆಯೋ, ಹಾಗೆಯೇ ಪಿಂಡವೆಂಬ ಮೊಗ್ಗೆಯಲ್ಲಿ ಪರಮಾತ್ಮನೆಂಬ ಪರಿಮಳವು ಗುಪ್ತವಾಗಿದೆ. ಯೌವನವು ಪ್ರಾಪ್ತವಾಗದೆ ಇರತಕ್ಕ ಕನ್ಯೆಯಲ್ಲಿ ಕಾಮಚಿಹ್ನವು ಹೇಗೆ ರಹಸ್ಯವಾಗಿರುತ್ತದೆಯೋ, ಹಾಗೆಯೇ ಈ ಪಿಂಡದಲ್ಲಿ ಪರಮಾತ್ಮನು ರಹಸ್ಯವಾಗಿದ್ದಾನೆ."

(೨) **ಸಕಲ ನಿಃಕಲ ಕೂಡಿಕೊಂಡಿಪ್ಪೆಯಾಗಿ| ಸಕಳ ನೀನೇ ನಿಃಕಳನು ನೀನೇ ಕಂಡಯ್ಯಾ| ವಿಶ್ವತೋಚಕ್ಷು ನೀನೇ ದೇವ| ವಿಶ್ವತೋಮುಖ ನೀನೇ ದೇವ| ವಿಶ್ವತೋಬಾಹು ನೀನೇ ದೇವ ಕೂಡಲಸಂಗಮದೇವ||** ಮಹೇಶ ಸ್ಥಳ ೬.

**ವಿವರಣೆ**—ಈ ಪಿಂಡಾಂಡದಲ್ಲಿರತಕ್ಕ ಆ ಪರಮಾತ್ಮನು ಬ್ರಹ್ಮಾಂಡದಲ್ಲಿಯೂ ವ್ಯಾಪಿಸಿದ್ದಾನೆ. ದೀಪದಲ್ಲಿ ದೃಶ್ಯವಾದ ಉರಿಯೊಂದೇಯಾಗಲಿ ಅಥವಾ ಅದೃಶ್ಯವಾದ ದಾಹಕ ಶಕ್ತಿಯೊಂದೇಯಾಗಲಿ ಇರದೆ ಆಕಾರ ನಿರಾಕಾರಗಳೆರಡೂ ಹೇಗೆ ಆ ದೀಪದಲ್ಲಿ ಕೂಡಿಕೊಂಡಿವೆಯೋ, ಹಾಗೆಯೇ ಬ್ರಹ್ಮಾಂಡವನ್ನು ವ್ಯಾಪಿಸಿರುವ ಪರಮಾತ್ಮನು ಕೂಡಾ ಸಗುಣ ಮತ್ತು ನಿರ್ಗುಣಗಳಿಂದ ಕೂಡಿಯೇ ಇದ್ದಾನೆ ಮತ್ತು ಸಗುಣನಾದ ಆ ಪರಮಾತ್ಮನು ಋಗ್ವೇದದ ಪುರುಷಸೂಕ್ತದಲ್ಲಿ ಹೇಳಿರುವಂತೆ 'ಸಹಸ್ರಶೀರ್ಷಾಃಪುರುಷಃ ಸಹಸ್ರಾಕ್ಷಃ ಸಹಸ್ರಪಾತ್' ಎಂಬಂತೆ ವಿಶ್ವರೂಪವನ್ನು ಧರಿಸಿದ್ದಾನೆ.

"ಸಗುಣ ಮತ್ತು ನಿರ್ಗುಣಗಳೆರಡೂ ನಿನ್ನಲ್ಲಿ ಕೂಡಿಕೊಂಡಿರುವುದರಿಂದ ಸಾಕಾರವಾಗಿ ತೋರುತ್ತಿರುವಾತನೂ ನೀನೇ ಸರಿ. ಆಕಾರವನ್ನು ಮೀರಿ ಕಲಾತೀತನಾಗಿರುವಾತನೂ ನೀನೇ ಸರಿ. ಈ ವಿಶ್ವವನ್ನೆಲ್ಲಾ ನಿನ್ನ ಕಣ್ಣುಗಳಿಂದಲೂ, ಮುಖಗಳಿಂದಲೂ, ಬಾಹುಗಳಿಂದಲೂ, ವ್ಯಾಪಿಸಿರುವಂಥಾತನೂ ನೀನೇ ಸರಿ."

(೩) **ಇಬ್ಬರು ಮೂವರು ದೇವರೆಂದು ಉಬ್ಬುಬ್ಬಿ ಮಾತಾಡಬೇಡ| ದೇವನೊಬ್ಬನೇ ಕಾಣಿರೋ| ಇಬ್ಬರೆಂಬುದು ಹುಸಿ ನೋಡ| ಕೂಡಲಸಂಗಮದೇವನೊಬ್ಬನಲ್ಲದಿಲ್ಲೆಂದಿತ್ತು ವೇದ||** ಮಹೇಶ ಸ್ಥಳ ೨೦.

**ವಿವರಣೆ**—ಆಕಾರ ನಿರಾಕಾರಗಳೆರಡರಿಂದಲೂ ಕೂಡಿ ಈ ವಿಶ್ವವನ್ನು ವ್ಯಾಪಿಸಿರುವ ಪರಬ್ರಹ್ಮನೊಬ್ಬನೇ ದೇವರಲ್ಲದೆ ನಾನಾ ದೇವರುಗಳಿಲ್ಲ. ಶ್ರುತಿಗಳಲ್ಲಿಯು ಕೂಡಾ 'ಏಕಮೇವಾದ್ವಿತೀಯಂ ಬ್ರಹ್ಮ' ಎಂಬುದಾಗಿ ಪರಬ್ರಹ್ಮ

ನೊಬ್ಬನೇ ಇದ್ದಾನೆಂದು ಹೇಳಿದೆ. ಆದಕಾರಣ ಅನೇಕ ದೇವರುಗಳಿವೆಯೆಂತಲೂ, ಅವುಗಳಲ್ಲಿ ಒಂದಕ್ಕಿಂತ ಒಂದು ಹೆಚ್ಚಿನದೆಂತಲೂ ತಿಳಿದು ಕಲಹ ಮಾಡುತ್ತಿರುವುದು ಅನುಚಿತವಾದುದಾಗಿದೆ. ಆದ ಪ್ರಯುಕ್ತ ಈ ವಿಷಯವು ಈ ವಚನದಲ್ಲಿ ವಿವರಿಸಲ್ಪಟ್ಟಿದೆ.

"ಬ್ರಹ್ಮ, ವಿಷ್ಣು, ಎಂಬ ಇಬ್ಬರು ದೇವರಿದ್ದಾರೆಂದಾಗಲಿ ಅಥವಾ ಬ್ರಹ್ಮ, ವಿಷ್ಣು, ರುದ್ರರೆಂಬ ಮೂವರು ದೇವರಿದ್ದಾರೆಂದಾಗಲಿ ಹೆಮ್ಮೆಯಿಂದ ಮಾತನಾಡಬಾರದು. ಒಬ್ಬನೇ ದೇವರಲ್ಲದೆ ಇಬ್ಬರು ದೇವರುಗಳಿವೆಯೆಂಬುದು ಸುಳ್ಳು. ವೇದವು ಕೂಡಾ ಒಬ್ಬನೇ ದೇವನಲ್ಲದೆ ಅನ್ಯ ದೇವರುಗಳಿಲ್ಲವೆಂದು ಹೇಳುತ್ತದೆ."

**(೪) ದೇವನೊಬ್ಬ ನಾಮ ಹಲವು| ಪರಮ ಪತಿವ್ರತೆಗೆ ಗಂಡನೊಬ್ಬ| ಮತ್ತೊಂದಕ್ಕೆರಗಿದರೆ ಕಿವಿಮೂಗ ಕೊಯ್ಯುವನು| ಹಲವು ದೈವದೆಂಜಲವ ತಿಂಬುವರನೇನೆಂಬೆ ಕೂಡಲ ಸಂಗಮದೇವ?||**

**ಮಹೇಶ ಸ್ಥಳ ೮೮.**

**ವಿವರಣೆ**—ಒಬ್ಬ ಪುರುಷನಿಗೇನೇ ಪತ್ನಿಯು ಪತಿಯೆಂತಲೂ, ತಮ್ಮನು ಅಣ್ಣನೆಂತಲೂ, ಅಣ್ಣನು ತಮ್ಮನೆಂತಲೂ, ಮಗನು ತಂದೆಯೆಂತಲೂ, ತಂದೆಯು ಮಗನೆಂತಲೂ, ಸೊಸೆಯು ಮಾವನೆಂತಲೂ ಹೇಗೆ ಅನೇಕ ಹೆಸರುಗಳಿಂದ ಕರೆಯುತ್ತಾರೆಯೋ, ಹಾಗೆಯೇ ವಿಶ್ವವ್ಯಾಪಿಯಾದ ಪರಮಾತ್ಮನಿಗೊಬ್ಬನಿಗೇನೇ ಬ್ರಹ್ಮ, ವಿಷ್ಣು, ರುದ್ರ ಎಂಬ ನಾನಾ ಹೆಸರುಗಳನ್ನಿಟ್ಟುಕೊಂಡಿದ್ದಾರೆ. "ಏಕಂ ಸದ್ವಿಪ್ರಾ ಬಹುಧಾವದಂತಿ" ಎಂದು ಶಾಶ್ವತವಾದ ಆ ಪರಶಕ್ತಿಯನ್ನೇ ವಿದ್ವಾಂಸರು ಅನೇಕ ಹೆಸರುಗಳಿಂದ ಕರೆಯುತ್ತಿದ್ದಾರೆಂದು ಶ್ರುತಿಗಳಲ್ಲಿಯೂ ಹೇಳಿದೆ. ಆದಕಾರಣ ಹೆಸರು ಬೇರೆಯಾದ ಮಾತ್ರದಲ್ಲಿ ದೇವರು ಬೇರೆಯೆಂದು ತಿಳಿಯುವುದು ವಿಹಿತವಲ್ಲ. ಯಾರು ಯಾವ ಹೆಸರಿನಿಂದ ದೇವರನ್ನು ಪ್ರಾರ್ಥಿಸಿದರೂ ಆ ಪ್ರಾರ್ಥನೆಯು ಪರಬ್ರಹ್ಮಕ್ಕೇನೇ ಮುಟ್ಟುತ್ತದೆ. ಏಕೆಂದರೆ ದೇವರು ಆತನೊಬ್ಬನೇ ಅಲ್ಲವೇ? ಯಾರು ಯಾವ ಮೂರ್ತಿಯನ್ನು ಪೂಜಿಸಿದರೂ ತಾನು ಪೂಜಿಸುವ ದೇವರನ್ನೇ ಅವರು ಪೂಜಿಸುತ್ತಾರೆಂದು ತಿಳಿದುಕೊಳ್ಳಬೇಕು. ಏಕೆಂದರೆ, ತನ್ನ ದೇವರಲ್ಲದೆ ಇನ್ನೊಂದು ದೇವರೇ ಇಲ್ಲವಷ್ಟೆ. ಆದಕಾರಣ ನಾಮರೂಪಗಳ ಭಿನ್ನತ್ವದಿಂದ ದೇವರು ಬೇರೆಬೇರೆಯೆಂದು ತಿಳಿದು ಕಲಹ ಮಾಡುವದು ಅನುಚಿತವಾಗಿದೆ.

ಆ ಪರಬ್ರಹ್ಮನಿಗೇನೇ ವೀರಶೈವ ಮತದಲ್ಲಿ ಶಿವ ಮತ್ತು ಲಿಂಗ ಎಂದು ಹೇಳಿದೆ. ಬಸವಣ್ಣನವರು ಆ ಶಿವನಿಗೇನೇ 'ಕೂಡಲ ಸಂಗಮದೇವ' ಎಂದು

ಹೇಳಿದ್ದಾರೆ. ಬ್ರಹ್ಮ-ವಿಷ್ಣುಗಳೆಂಬ ಬೇರೆಬೇರೆ ಹೆಸರಿನ ಭಿನ್ನಭಿನ್ನ ಮೂರ್ತಿಗಳಲ್ಲಿಯೂ ಲಿಂಗದೇವನೇ ಇದ್ದರೂ, ವೀರಶೈವನು ಇಷ್ಟಲಿಂಗವೊಂದನ್ನೇ ಪೂಜಿಸಬೇಕೇ ವಿನಾ ಅನ್ಯ ಮೂರ್ತಿಗಳನ್ನು ಏಕೆ ಪೂಜಿಸಬಾರದೆಂದರೆ:- ಲೋಕದಲ್ಲಿರುವ ಎಲ್ಲಾ ಪುರುಷರೂ ತನ್ನ ಪತಿಯಂತೆಯೇ ಪುರುಷರಾಗಿದ್ದರೂ ಪತಿವ್ರತೆಯಾದ ಸ್ತ್ರೀಯಳು ಹೇಗೆ ತಾನು ಲಗ್ನವಾದ ಪುರುಷನನ್ನು ಮಾತ್ರ ತಾನು ಪತಿಯೆಂದು ಭಾವಿಸಿ ಪತಿಭಕ್ತಿಯನ್ನು ಆತನಲ್ಲಿ ಮಾತ್ರ ಇಡುತ್ತಾಳೆಯೋ, ಹಾಗೆಯೇ ವೀರಶೈವ ಮತವನ್ನು ಸ್ವೀಕರಿಸುವಾಗ ತಾನು **ಸತಿ,** ಲಿಂಗದೇವನು **ಪತಿ**ಯೆಂಬ ಮಧುರ ಭಕ್ತಿಯ ಮಾರ್ಗವನ್ನು ಅನುಸರಿಸುವದಾಗಿ ನಿಶ್ಚಯಿಸಿರುವುದರಿಂದ ಪತಿವ್ರತಾ ಸ್ತ್ರೀಯಳಂತೆ ಇಷ್ಟಲಿಂಗದಲ್ಲಿಯೇ ಭಕ್ತಿಯ ಸಾಮರಸ್ಯವನ್ನಿಡಬೇಕೇ ವಿನಾ ಅನ್ಯ ಮೂರ್ತಿಗಳಲ್ಲಿ ಆ ಭಕ್ತಿಯನ್ನಿಟ್ಟರೆ ವ್ಯಭಿಚಾರ ದೋಷವು ಪ್ರಾಪ್ತವಾಗುತ್ತದೆ.

ಒಂದು ಸ್ಥಲದಲ್ಲಿ ಬಿತ್ತಿದ ಬೀಜವನ್ನು ಅಲ್ಲಿಯೇ ಇಟ್ಟರೆ ಅದು ಮೊಳೆತು ಸಸಿಯಾಗಿ ಹೇಗೆ ಬೇರುಗಳನ್ನು ಬಿಟ್ಟು ಗಿಡವಾಗಿ ಫಲವನ್ನು ಕೊಡುತ್ತದೆಯೋ, ಹಾಗೆಯೇ ಭಕ್ತಿಯೆಂಬ ಬೀಜವನ್ನು ಇಷ್ಟಮೂರ್ತಿಯೆಂಬ ಒಂದೇ ಸ್ಥಳದಲ್ಲಿ ಇರಿಸಿದರೇನೇ ಆ ಭಕ್ತಿಯು ಅಂಕುರಿಸಿ ಫಲವನ್ನುಂಟುಮಾಡುವುದು. ಎಲ್ಲಾ ಭೂಮಿಯು ಒಂದೇ ಎಂದು ಒಂದು ಸ್ಥಳದಲ್ಲಿ ಬಿತ್ತಿದ ಬೀಜವನ್ನು ತೆಗೆದು ಮತ್ತೊಂದು ಸ್ಥಳದಲ್ಲಿಟ್ಟು ಮತ್ತೆ ಅಲ್ಲಿಂದ ತೆಗೆದುಕೊಂಡು ಇನ್ನೊಂದು ಸ್ಥಳದಲ್ಲಿ ಹಾಕುತ್ತ ಹೋದರೆ ಹೇಗೆ ಆ ಬೀಜವು ಮೊಳೆತು ಸಸಿಯಾಗಿ ಫಲವನ್ನು ಕೊಡುವುದಿಲ್ಲವೋ, ಹಾಗೆಯೇ ಭಕ್ತಿಯ ಬೀಜವನ್ನು ನಾನಾ ಮೂರ್ತಿಗಳೆಂಬ ಬೇರೆಬೇರೆ ಸ್ಥಳಗಳಲ್ಲಿಡುತ್ತ ಹೋದರೆ ಆ ಭಕ್ತಿಯಿಂದ ಮೋಕ್ಷವೆಂಬ ಫಲವು ದೊರೆಯುವುದಿಲ್ಲ. ಆದಕಾರಣ ಒಂದೇ ಮೂರ್ತಿಯಲ್ಲಿಯೇ ಆ ಭಕ್ತಿಯನ್ನಿಡುವದು ವಿಹಿತವಾಗಿದೆ. ಈ ವಿಷಯವನ್ನೇ ಮಹಾನುಭಾವರು ಈ ವಚನದಲ್ಲಿ ಈ ಪ್ರಕಾರ ವಿವರಿಸಿದ್ದಾರೆ.

"ದೇವರು ಒಬ್ಬಾತನೇ ಸರಿ. ಆದರೆ ಆತನಿಗೆ ಹೆಸರುಗಳು ಮಾತ್ರ ಅನೇಕವಾಗಿವೆ. ಪತಿವ್ರತಾ ಸ್ತ್ರೀಯಳಿಗೆ ಪತಿಯು ಒಬ್ಬನೇ ಇರುತ್ತಾನಷ್ಟೆ. ಆ ಸ್ತ್ರೀಯಳು ಪತಿವ್ರತಾ ಧರ್ಮವನ್ನು ಮೀರಿ ಅನೇಕರನ್ನು ಪತಿಗಳನ್ನಾಗಿ ಮಾಡಿಕೊಂಡರೆ ಆಗ ಆ ನಿಜ ಪತಿಯು ಹೇಗೆ ಅವಳ ಕಿವಿ ಮೂಗುಗಳನ್ನು ಕೊಯ್ಯುತ್ತಾನೆಯೋ ಹಾಗೆಯೇ ವೀರಶೈವನು ಮೊದಲು ತಾನು ಸ್ವೀಕರಿಸಿದ ಲಿಂಗದೇವನೊಬ್ಬನಲ್ಲಿಯೇ ತನ್ನ ಭಕ್ತಿಯನ್ನಿಡದೆ ಅನ್ಯ ದೇವರುಗಳನ್ನು ಪೂಜಿಸಿದರೆ ಲಿಂಗದೇವನ ಕೋಪಕ್ಕೀಡಾಗಬೇಕಾಗುತ್ತದೆ. ನಾನಾ ದೇವರುಗಳನ್ನು

ಪೂಜಿಸಿ ನೈವೇದ್ಯವೆಂಬ ಅವ್ರಗಳ ಎಂಜಲವನ್ನು ತಿನ್ನುವವರಿಗೆ ಏನೆಂದು ಹೇಳ ಬೇಕೋ ತಿಳಿಯದು."

**(೫) ಭವಬಂಧನ ಭವಪಾಶಗಳಾದ ಕಾರಣವೇನಯ್ಯ? ಹಿಂದಣ ಜನ್ಮದಲ್ಲಿ ಲಿಂಗವ ಮರೆದೆನಾಗಿ| ಹಿಂದಣ ಸಿರಿಯಲ್ಲಿ ಜಂಗಮವ ಜರಿದೆನಾಗಿ| ಅರಿದಡೀ ಸಂಸಾರವ ಹೊದ್ದಲೀವೆನೆ ಕೂಡಲ ಸಂಗಮದೇವ||**

ಭಕ್ತಸ್ಥಳ ೭.

**ವಿವರಣೆ**—ಯಾವ ಮನುಷ್ಯನಿಗೆ ರೋಗ ಪ್ರಾಪ್ತವಾಗುತ್ತದೆಯೋ, ಆತನೇ ಅದರ ಕಾರಣವನ್ನು ಮತ್ತು ಅದು ನಿವಾರಣೆಯಾಗುವ ಉಪಾಯವನ್ನು ಕಂಡು ಹಿಡಿಯಲು ಪ್ರಯತ್ನಿಸುತ್ತಾನಷ್ಟೆ. ಅದರಂತೆಯೇ ಯಾವಾತನು ತಾನು ಹುಟ್ಟಿದ್ದು ಬದುಕಿದ್ದು ಮತ್ತು ಸಾಯುವುದು ದುಃಖಮಯವಾದುದೆಂದು ತಿಳಿಯುತ್ತಿದ್ದಾನೆಯೋ ಆತನೇ ಈ ಹುಟ್ಟು ಸಾವುಗಳೆಂಬ ರೋಗದ ಕಾರಣವನ್ನು ಕಂಡು ಹಿಡಿದು ಈ ಭವರೋಗದಿಂದ ಪಾರಾಗಲು ಪ್ರಯತ್ನಿಸುತ್ತಾನೆ. ಧರ್ಮವೆಂಬ ಔಷಧಿಯಾದರೂ ಈ ಭವರೋಗದಿಂದ ಬಳಲುವವರಿಗೇನೇ ಬೇಕಾಗಿದೆ. ಇಂಥ ರೋಗಗಳನ್ನು ಕುರಿತು ಈ ರೋಗ ಬಂದ ಕಾರಣ ಮತ್ತು ಇದು ನಿವಾರಣೆಯಾಗುವ ಉಪಾಯಗಳ ಸಂಬಂಧವಾಗಿ ಈ ವಚನದಲ್ಲಿ ವಿವರಿಸಿದ್ದಾರೆ.

"ಹೇಸಿಕೆಯಿಂದ ಕೂಡಿದ ತಾಯಿಯ ಗರ್ಭದಲ್ಲಿ ವಾಸವಾಗಿರುವ ಭವ ಬಂಧನವು ಮತ್ತು ಆ ಗರ್ಭದಿಂದ ಹೊರಗೆ ಬಂದ ನಂತರ ದಿನೇದಿನೇ ನಾನಾ ವಿಷಯಾಪೇಕ್ಷೆಗಳಿಂದ ಬೆಂದು ಬೆಂಡಾಗಿ ಕೊನೆಗೆ ಮೃತ್ಯುವಿಗೆ ತುತ್ತಾಗುವ ಕಾಮ-ಕಾಲರ ಭವ ಪಾಶಗಳು ಜೀವನಿಗೆ ಪ್ರಾಪ್ತವಾಗಲು ಕಾರಣವೇನಂದರೆ:- ಹಿಂದಣ ಜನ್ಮದಲ್ಲಿ ಲಿಂಗದೇವನ ಪೂಜೆ ಧ್ಯಾನಗಳನ್ನು ಮಾಡದೆ ಆತನನ್ನು ಮರೆತುಬಿಟ್ಟಿದ್ದನು. ಮತ್ತು ಹಿಂದಣ ಜನ್ಮದಲ್ಲಿ ತನಗೆ ಅಷ್ಟೈಶ್ವರ್ಯಗಳು ಪ್ರಾಪ್ತವಾದಾಗಧನಮದದಿಂದಜ್ಞಾನಮೂರ್ತಿಯಾದ ಜಂಗಮವನ್ನು ಜರಿದಿದ್ದನು. ಲಿಂಗದೇವನನ್ನು ಮರೆಯದೆ ಪೂಜಿಸಿ ಧ್ಯಾನಿಸಿದ್ದರೆ ಮತ್ತು ಜಂಗಮ ಮೂರ್ತಿಯನ್ನು ಜರಿಯದೆ ಅಷ್ಟೈಶ್ವರ್ಯಗಳನ್ನು ಸಮರ್ಪಿಸಿ ತೃಪ್ತಿಪಡಿಸಿದ್ದರೆ, ಈ ಸಂಸಾರವು ಎಂದರೆ ಭವಬಂಧದ-ಭವಪಾಶಗಳು ಜೀವನಿಗೆ ಪ್ರಾಪ್ತವಾಗುತ್ತಿರಲಿಲ್ಲ."

**(೬) ಚಂದ್ರಮನಂತೆ ಕಳೆ ಸಮನಿಸಿತ್ತೆನಗೆ | ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿತ್ತಯ್ಯಾ| ಇಂದೆನ್ನ ದೇಹಕ್ಕೆ ಗ್ರಹಣ ವಾಯಿತ್ತು| ಇನ್ನೆಂದಿಗೆ ಮೋಕ್ಷವಹುದೋ ಕೂಡಲಸಂಗಮದೇವ?**

ಭಕ್ತಸ್ಥಳ ೯.

**ವಿವರಣೆ**—ದೇವರನ್ನು ಮರೆತುದರಿಂದಲೇ ಜೀವನು ಈ ಸಂಸಾರದಲ್ಲಿ ಹುಟ್ಟಿ ಬಂದು ನಾನಾ ದುಃಖಗಳಿಗೀಡಾಗಬೇಕಾಯಿತೆಂದು ಸಕಲ ಆಸ್ತಿಕರೂ ಹೇಳುತ್ತಿದ್ದಾರಷ್ಟೆ. ಇಂಥ ಜೀವನಿಗೆ ಸಂಸಾರವು ಯಾವ ಪ್ರಕಾರ ಪ್ರಾಪ್ತವಾಗಿ ಎಂಥ ಸ್ಥಿತಿಯನ್ನುಂಟುಮಾಡುತ್ತದೆಂಬದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ಹುಣ್ಣಿವೆಯ ಚಂದ್ರನು ಹೇಗೆ ಸಂಪೂರ್ಣ ಕಳೆಯುಳ್ಳವನಾಗಿರುತ್ತಾನೆಯೋ ಹಾಗೆಯೇ ಜೀವನು ಪರಮಾತ್ಮನ (ಲಿಂಗದೇವನ) ಸಂಪೂರ್ಣ ಪ್ರಕಾಶವುಳ್ಳವನಾಗಿದ್ದನು. ಆದರೆ ಚಂದ್ರನನ್ನು ರಾಹು ಬಂದು ಹೇಗೆ ಹಿಡಿದುಕೊಳ್ಳುತ್ತಾನೆಯೋ ಹಾಗೆಯೇ ಹೊನ್ನು, ಹೆಣ್ಣು, ಮಣ್ಣು ಮೊದಲಾದವುಗಳಿಂದ ಕೂಡಿದ ಈ ಸಂಸಾರವೆಂಬ ರಾಹು ಜೀವನನ್ನು ನುಂಗಿಬಿಟ್ಟುದರಿಂದ ಈ ದೇಹಕ್ಕೆ ಗ್ರಹಣ ಪ್ರಾಪ್ತವಾಯಿತು ಆದಕಾರಣ ಲಿಂಗದೇವನೆ, ಈ ಸಂಸಾರವೆಂಬ ರಾಹುವಿನಿಂದ ನಾನು ಯಾವಾಗ ಬಿಡುಗಡೆ ಹೊಂದುವೆನು? ಎಂದರೆ ನನಗೆ ಯಾವಾಗ ಮೋಕ್ಷ ಪ್ರಾಪ್ತಿಯಾಗುವುದು?"

**(೭) ಕಪ್ಪೆ ಸರ್ಪನ ನೆಳಲಲ್ಲಿಪ್ಪಂತೆ ಎನಗಾಯಿತಯ್ಯಾ! ಅಕಟಕಟಾ ಸಂಸಾರ| ವೃಥಾ ಹೋಯಿತಲ್ಲಾ | ಕರ್ತೃ ಕೂಡಲಸಂಗಮದೇವಾ ಇವತಪ್ಪಿಸಿ ಎನ್ನನು ರಕ್ಷಿಸಯ್ಯಾ||** ಭಕ್ತ ಸ್ಥಳ ೧೧

**ವಿವರಣೆ**—ಈ ಸಂಸಾರಕ್ಕೆ ಮೇಲಿನ ವಚನದಲ್ಲಿ ರಾಹುವಿನ ಉಪಮೆಯನ್ನು ಕೊಟ್ಟಿದ್ದಾರಷ್ಟೆ. ಈ ವಚನದಲ್ಲಿ ಸಂಸಾರವು ಸರ್ಪನಂತಿದೆಯೆಂದು ಹೇಳಿದ್ದಾರೆ ಒಂದು ಕಪ್ಪೆಯು ನೆರಳಲ್ಲಿ ಸುಖದಿಂದ ಕುಳಿತುಕೊಳ್ಳಬೇಕೆಂದು ಹೋಗುತ್ತಿರುವಾಗ ದಾರಿಯಲ್ಲಿ ಒಂದು ಭಯಂಕರವಾದ ಸರ್ಪವು ತನ್ನ ಹೆಡೆಗಳನ್ನು ತೆಗೆದು ಆಡುತ್ತಿದ್ದುದರಿಂದ ಆ ಹೆಡೆಗಳ ನೆರಳನ್ನು ನೋಡಿ ಅದು ತಂಪಾದ ಸ್ಥಳವೆಂದು ಅಲ್ಲಿಗೆ ಹೋದರೆ ಆ ಕಪ್ಪೆಯು ಹೇಗೆ ಸರ್ಪನ ಬಾಯಲ್ಲಿ ಬೀಳಬೇಕಾಗುತ್ತದೆಯೋ, ಹಾಗೆಯೇ ಈ ಜೀವಾತ್ಮನೆಂಬ ಕಪ್ಪೆಯು ಮೋಕ್ಷ ಸುಖವನ್ನನುಭವಿಸಬೇಕೆಂದಪೇಕ್ಷಿಸಿ ಸಂಚರಿಸುತ್ತಿರುವಾಗ ಈ ಸಂಸಾರವು ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ, ಪಂಚ ವಿಷಯುಗಳಾದ ಐದು ಹೆಡೆಗಳನ್ನು ಬಿಚ್ಚಿಕೊಂಡಿರುವುದರಿಂದ ಬಿದ್ದಿರುವ ವಿಷಯ ಸುಖವೆಂಬ ನೆರಳನ್ನು ನೋಡಿ ಜೀವಾತ್ಮನಾದ ಕಪ್ಪೆಯು ಅದನ್ನು ಆಶ್ರಯಿಸಹೋಗಲು ಸಂಸಾರ ಸರ್ಪನ ಬಾಯಲ್ಲಿ ಬೀಳಬೇಕಾಗುವುದಷ್ಟೆ. ಆದಕಾರಣ ಈ ಸಂಸಾರದಿಂದ ಪಾರುಮಾಡಲು ಲಿಂಗದೇವನನ್ನು ಪ್ರಾರ್ಥಿಸಿಕೊಂಡಿದ್ದಾರೆ.

ಅಯ್ಯೋ! ಕಪ್ಪೆಗೆ ಸರ್ಪನ ನೆರಳು ಹೇಗೆ ಅನರ್ಥಕಾರಿಯೋ, ಹಾಗೆಯೇ ನನಗೆ ಈ ಸಂಸಾರ ಸುಖವು ಅಪಾಯಕ್ಕೆ ಕಾರಣವಾಯಿತಲ್ಲಾ! ಈ ನನ್ನ ಜನ್ಮವು ವ್ಯರ್ಥವಾಗಿ ಹೋಯಿತಲ್ಲಾ! ಉತ್ಪತ್ತಿ, ಸ್ಥಿತಿ, ಲಯ, ತಿರೋಧಾನ, ಅನುಗ್ರಹಗಳೆಂಬ ಪಂಚಕೃತ್ಯಗಳಿಗೆ ಕರ್ತನಾದ ಲಿಂಗದೇವನೆ, ಈ ಸಂಸಾರದುಃಖದಿಂದ ನನ್ನನ್ನು ರಕ್ಷಿಸು."

(೮) **ಶೂಲದ ಮೇಲಣ ಭೋಗವೇನಾದರೇನು? ನಾನಾವರ್ಣದ ಸಂಸಾರ ಹಾವು ಹಾವಾಡಿಗನ ಸ್ನೇಹದಂತೆ| ತನ್ನಾತ್ಮವೇ ತನಗೆ ಹಗೆಯಾದ ಬಳಿಕ ಬಿನ್ನಾಣವುಂಟೇ ಮಹಾದಾನಿ ಕೂಡಲ ಸಂಗಮದೇವ||**

ಭಕ್ತ ಸ್ಥಳ ೧೧.

**ವಿವರಣೆ**—ಈ ಸಂಸಾರದಲ್ಲಿರುವ ಜೀವನಿಗೆ ಸಂಸಾರವು ಯಾವ ಪ್ರಕಾರವಾಗಿರುತ್ತದೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ ಹಾವಾಡಿಗನು ಒಂದು ಹಾವನ್ನು ಹಿಡಿದುಕೊಂಡು ಬಂದು ಅದರ ಮೂಲಕ ತಾನು ಜೀವಿಸುತ್ತಿರುತ್ತಾನಷ್ಟೆ. ಆ ಹಾವು ತನ್ನನ್ನು ಬಿಟ್ಟು ಎಲ್ಲಿಯೂ ಹೋಗಬಾರದೆಂದು ಮತ್ತು ಕಚ್ಚಬಾರದೆಂದು ಬಹು ಎಚ್ಚರಿಕೆಯಿಂದ ಅದನ್ನು ತನ್ನ ಹತ್ತಿರದಲ್ಲಿಟ್ಟುಕೊಂಡಿರುತ್ತಾನೆ ಆ ಹಾವಾದರೋ ತಾನು ಯಾವಾಗ ಹೇಗೆ ಆತನನ್ನು ಕಚ್ಚಿ ಆತನ ಕೈಯಿಂದ ಪಾರಾಗಿ ಹೋಗಬೇಕೆಂಬುದನ್ನೇ ಯೋಚಿಸುತ್ತಿರುತ್ತದೆ. ಆದಕಾರಣ ಹಾವು ಮತ್ತು ಹಾವಾಡಿಗನು ಭಯದಿಂದಲೇ ಕಾಲ ಕಳೆಯಬೇಕಾಗುತ್ತದೆ. ಇದೇ ಪ್ರಕಾರ ಜೀವನೆಂಬ ಹಾವಾಡಿಗನು ಸಂಸಾರವೆಂಬ ಹಾವನ್ನು ತನ್ನಾಧೀನದಲ್ಲಿಟ್ಟುಕೊಂಡು ಇವನ್ನು ತನ್ನ ಮೋಕ್ಷ ಸುಖಕ್ಕೆ ಸಾಧನವನ್ನಾಗಿ ಮಾಡಿಕೊಳ್ಳಬೇಕೆಂದಪೇಕ್ಷಿಸುತ್ತಾನೆ ಸಂಸಾರವೆಂಬ ಸರ್ಪವಾದರೋ ವಿಷಯಗಳೆಂಬ ತನ್ನ ವಿಷದ ಹಲ್ಲುಗಳಿಂದ ಜೀವನನ್ನು ಕಚ್ಚಿ ಹೋಗಬೇಕೆಂದೇ ಯೋಚಿಸಿರುತ್ತದೆ. ಆದಕಾರಣ ಹಾವು-ಹಾವಾಡಿಗರ ಸ್ನೇಹದಂತೆ ಈ ಸಂಸಾರ-ಜೀವರುಗಳ ಸಂಬಂಧವಿದೆಯೆಂತಲೂ, ತನಗೆ ಆತ್ಮಸ್ವರೂಪವಾಗಿ ಪರಿಣಮಿಸಿರುವ ಈ ಸಂಸಾರವೇ ತನಗೆ ವೈರಿಯೆಂದ ಬಳಿಕ ಪಾರಾಗಲು ಬೇರೆ ಉಪಾಯವಿಲ್ಲವೆಂತಲೂ, ಇಂತಹ ಸ್ಥಿತಿಯಲ್ಲಿ ಸಂಸಾರದ ಎಷ್ಟೇ ಸುಖೋಪಭೋಗದ ವಸ್ತುಗಳು ಜೀವನಿಗೆ ಪ್ರಾಪ್ತವಾದರೂ ಶೂಲವನ್ನೇರುವವನು ಎಷ್ಟೇ ಭೋಗ್ಯ ವಸ್ತುಗಳನ್ನನುಭವಿಸಿದರು ಹೇಗೆ ಮರಣಭಯದಿಂದಲೇ ಪೀಡಿತನಾಗಿರುತ್ತಾನೆಯೋ, ಹಾಗೆಯೇ ಜೀವನು ಈ ಸಂಸಾರದಲ್ಲಿ ಭಯಗ್ರಸ್ತನಾಗಿಯೇ ಇರಬೇಕಾಗುತ್ತದೆಂತಲೂ ಈ ವಚನದಲ್ಲಿ ವಿವರಿಸಿದ್ದಾರೆ.

"ನಾಳಿಯೇ ಶೂಲವನ್ನೇರಬೇಕಾದವನಿಗೆ ಈ ದಿವಸ ಎಷ್ಟು ಭೋಗ್ಯ ವಸ್ತುಗಳನ್ನು ಕೊಟ್ಟರೂ ಆತನಿಗೆ ಅವು ಸುಖವನ್ನೇನಾದರೂ ಉಂಟುಮಾಡು ವವೇ? ಇಲ್ಲ. ನಾನಾ ವಿಷಯಗಳಿಂದ ಕೂಡಿರುವ ಈ ಸಂಸಾರಕ್ಕೂ ಜೀವನಿಗೂ ಹಾವು-ಹಾವಾಡಿಗರಂತೆ ಭಯಗ್ರಸ್ತವಾದಸಂಬಂಧವಿದೆಯೇ ವಿನಾ ನಿರ್ಭಯವಾದ ಪ್ರೇಮದ ಸ್ನೇಹವಿಲ್ಲ. ಆದಕಾರಣ ಮಹಾ ಕೃಪಾನಿಧಿಯಾದ ಲಿಂಗದೇವನೇ, ನನಗೆ ಆತ್ಮದಂತಾಗಿರುವ ಈ ಸಂಸಾರವೇ ಈ ಪ್ರಕಾರ ವೈರಿಯಾದ ಮೇಲೆ ಬೇರೆ ಉಪಾಯುವಿಲ್ಲದಂತಾಯಿತಲ್ಲಾ!"

(೯) **ಕರಿ ಘನ ಅಂಕುಶ ಕಿರಿದೆನ್ನಬಹುದೆ? ಬಾರದಯ್ಯ। ಗಿರಿ ಘನ ವಜ್ರ ಕಿರಿದೆನ್ನಬಹುದೆ? ಬಾರದಯ್ಯ। ತಮಂಧ ಘನ ಜ್ಯೋತಿ ಕಿರಿದೆನ್ನಬಹುದೆ? ಬಾರದಯ್ಯ। ಮರವು ಘನ ನಿಮ್ಮ ನೆನೆವ ಮನವ ಕಿರಿದೆನ್ನಬಹುದೆ? ಬಾರದಯ್ಯ ಕೂಡಲಸಂಗಮದೇವ॥** ಭಕ್ತಸ್ಥಳ ೬.

ವಿವರಣೆ—ಲಿಂಗದೇವನನ್ನು ಮರೆದುದರಿಂದ ಈ ಸಂಸಾರದಲ್ಲಿ ಹುಟ್ಟಿ ಬರಬೇಕಾಯಿತೆಂತಲೂ, ಈ ಸಂಸಾರವಾದರೋ ನಾನಾ ದುಃಖಗಳಿಗೀಡು ಮಾಡಿ ಪರಿಪರಿಯಿಂದ ಕಾಡುತ್ತಿರುವುದೆಂತಲೂ, ಈ ಮುಂಚಿನ ವಚನಗಳಲ್ಲಿ ಹೇಳಿದ್ದಾರಷ್ಟೆ, ಆದಕಾರಣ ಈಗಿನ ದುಃಖಕ್ಕೆ ಹಿಂದಿನ ಮರವೆಯೇ ಮೂಲ ಕಾರಣವಾಯಿತು. ಈ ಮರವೆಯು ಎಷ್ಟೋ ಜನ್ಮಗಳಿಂದ ಕೂಡಿಕೊಂಡು ಬಂದು ಬಹು ಮಹತ್ತರವಾದ ದುಃಖಕ್ಕೆ ಕಾರಣವಾಗಿದ್ದರೂ ಮನಸ್ಸು ಈಗ ಅರಿತುಕೊಂಡು ಲಿಂಗ ದೇವನನ್ನು ಸ್ಮರಿಸಲುಪಕ್ರಮಿಸಿದರೆ ಈಗಣ ಎಲ್ಲಾ ವಿಪತ್ತುಗಳನ್ನೂ ನಿವಾರಣೆ ಮಾಡುವಂಥ ಸಾಮರ್ಥ್ಯವು ಲಿಂಗಧ್ಯಾನಾಸಕ್ತವಾದ ಮನಸ್ಸಿನಲ್ಲಿ ಉಂಟೇ ಉಂಟೆಂಬುದು ಮೂರು ದೃಷ್ಟಾಂತಗಳಿಂದ ಈ ವಚನದಲ್ಲಿ ವಿವರಿಸಿದ್ದಾರೆ.

"ಆನೆಯು ಎಷ್ಟೇ ದೊಡ್ಡದಾಗಿದ್ದರೂ ಅದು ತಪ್ಪಿ ನಡೆಯುತ್ತಿದ್ದರೆ ಬಹು ಚಿಕ್ಕದಾದ ಅಂಕುಶವು ಅದನ್ನು ದಾರಿಗೆ ತರುವುದಿಲ್ಲವೇ? ವಜ್ರವು ಸಣ್ಣದಾಗಿದ್ದರೂ ಪರ್ವತಪ್ರಾಯವಾದ ಕಲ್ಲುಗಳನ್ನು ಕೊರೆಯುವುದಿಲ್ಲವೇ? ಎಷ್ಟೋ ವರ್ಷಗಳಿಂದ ಕೂಡಿದ ಕತ್ತಲೆಯನ್ನು ಚಿಕ್ಕದಾದ ಬೆಳಕು ಓಡಿಸಿ ಬಿಡುವುದಿಲ್ಲವೇ? ಹಾಗೆಯೇ ಪರಮಾತ್ಮ ಸಂಬಂಧವಾದ ಮರವೆಯು ಎಷ್ಟೇ ಜನ್ಮಗಳಿಂದ ಕೂಡಿ ಬಹು ಘನವಾದುದಾಗಿ ಪರಿಣಮಿಸಿದ್ದರೂ ಲಿಂಗದೇವನೇ, ನಿನ್ನನ್ನು ಸ್ಮರಿಸುವ ಈ ಮನಸ್ಸು ಆ ಮರವೆಯನ್ನು ನಿವಾರಣೆ ಮಾಡಲು ಸಾಮರ್ಥ್ಯವುಳ್ಳದ್ದಾಗಿರುವುದರಿಂದ ಈ ಮನಸ್ಸು ಸಣ್ಣದೆಂದು ಹೇಳಲಿಕ್ಕಾಗುವುದಿಲ್ಲ."

**(೧೦) ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವದೆನ್ನ ಮನವು | ನಿಂದಲ್ಲಿ ನಿಲಲೀಯದೆನ್ನ ಮನವು | ಹೊಂದಿದಲ್ಲಿ ಹೊಂದಲೀಯದೆನ್ನಮನವು | ಕೂಡಲ ಸಂಗಮದೇವ ನಿಮ್ಮ ಚರಣ ಕಮಲದಲ್ಲಿ ಭ್ರಮರನಾಗಿರಿಸು ನಿಮ್ಮ ಧರ್ಮ||** ಭಕ್ತ ಸ್ಥಳ ೩೨,

**ವಿವರಣೆ**—ಲಿಂಗದೇವನನ್ನು ಮರೆತ ಮನಸ್ಸೇ ಸಂಸಾರ ಬಂಧನಕ್ಕೂ, ಲಿಂಗದೇವನನ್ನು ಅರಿತ ಮನಸ್ಸೇ ಸಂಸಾರದಿಂದ ಬಿಡುಗಡೆ ಹೊಂದುವುದಕ್ಕೂ ಕಾರಣವಾಗಿದೆಯೆಂದು ಈ ಮುಂಚಿನ ವಚನದಲ್ಲಿ ಹೇಳಲ್ಪಟ್ಟಿರುವುದರಿಂದ ಅಂಥ ಬಂಧ ಮೋಕ್ಷಗಳಿಗೆ ಕಾರಣವಾದ ಮನಸ್ಸು ಮಂಗನಂತೆ ಇದೆಯೆಂತಲೂ, ಈ ಮಂಗವು ದೇಹವೆಂಬ ವೃಕ್ಷದ, ಕಣ್ಣು ನಾಲಿಗೆ, ಕಿವಿ, ಮೊದಲಾದ ಇಂದ್ರಿಯಗಳೆಂಬ ಕೊಂಬೆಗಳ ಮೇಲೆ ರೂಪ, ರಸ, ಗಂಧಗಳೇ ಮೊದಲಾದ ವಿಷಯಗಳೆಂಬ ಫಲಗಳನ್ನು ಅನುಭವಿಸಲು ಹಾರಾಡುತ್ತಿರುವುದರಿಂದ ಮನಸ್ಸಿನ ಈ ಮಂಗತನವನ್ನು ಕಳೆದು ಇದಕ್ಕೆ ಭ್ರಮರ ಸ್ವರೂಪವನ್ನುಂಟುಮಾಡೆಂದು ಈ ವಚನದಲ್ಲಿ ಪ್ರಾರ್ಥಿಸಿಕೊಂಡಿದ್ದಾರೆ.

“ಈ ನನ್ನ ಮನಸ್ಸು ಒಂದೇ ಕಡೆ ನಿಲ್ಲುವುದೂ ಇಲ್ಲ. ಒಂದನ್ನೇ ಸೇರಿಕೊಂಡೂ ಇರುವುದಿಲ್ಲ. ಗಿಡದ ಟೊಂಗೆಗಳಮೇಲೆ ಅತ್ತಿತ್ತ ಹಾರಾಡುತ್ತಿರುವ ಮಂಗನಂತೆ ನಾನಾ ವಿಷಯಗಳ ಕಡೆಗೆ ಜಿಗಿದಾಡುತ್ತಲಿದೆ. ಆದಕಾರಣ ಲಿಂಗದೇವನೇ, ನೀನು ಕೃಪೆಮಾಡಿ ನಿನ್ನ ಚರಣಗಳೆಂಬ ಕಮಲಗಳಲ್ಲಿ ಇದನ್ನು ಭ್ರಮರವನ್ನಾಗಿ ಮಾಡಿರಿಸು.”

**(೧೧) ಅಂದಣವನೇರಿದ ಸೊಣಗನಂತೆ ಕಂಡಡೆ ಬಿಡದು ತನ್ನ ಮುನ್ನಿನ ಸ್ವಭಾವವನು| ಸುಡು ಸುಡೀ ಮನವಿದು ವಿಷಯಕ್ಕೆ ಹರಿವುದು| ಮೃಡ ನಿಮ್ಮ ನೆನೆಯಲೀಯದು| ಎನ್ನೊಡೆಯ ಕೂಡಲ ಸಂಗಮದೇವ ನಿಮ್ಮ ಚರಣವ ನೆನೆವಂತೆ ಕರುಣಿಸು ಸೆರಗೊಡ್ಡಿ ಬೇಡುವೆ ನಿಮ್ಮ ಧರ್ಮ ನಿಮ್ಮ ಧರ್ಮ||** ಭಕ್ತ ಸ್ಥಳ ೩೪

**ವಿವರಣೆ**—ಈ ಮನಸ್ಸು ಕಾಡಿನಲ್ಲಿ ಗಿಡಗಳ ಮೇಲೆ ಸ್ವೇಚ್ಛೆಯಿಂದ ತಿರುಗಾಡುತ್ತಿರುವ ಮಂಗನಂತಿದೆಯೆಂದು ಮೇಲಣ ವಚನದಲ್ಲಿ ಹೇಳಿ ಈ ವಚನದಲ್ಲಿ ಆ ಮನಸ್ಸಿಗೆ ಪಾಲಕಿಯಲ್ಲಿ ಕುಳಿತ ನಾಯಿಯ ಉಪಮೆಯನ್ನು ಕೊಟ್ಟಿದ್ದಾರೆ. ತಾನು ಪಾಲಕಿಯಲ್ಲಿ ಕುಳಿತಿದ್ದೇನೆಂತಲೂ ಅದಕ್ಕೆ ಭೂಷಣಪ್ರದವಾಗುವಂತೆ ತಾನು ಸುಮ್ಮನೇ ಕುಳಿತುಕೊಳ್ಳಬೇಕೆಂತಲೂ ನಾಯಿಯು ಯೋಚಿಸು

ತ್ತದೆಯೇ? ಇಲ್ಲವೇ ಇಲ್ಲ, ದಾರಿಯಲ್ಲಿ ಮಾಂಸವನ್ನು ಕಂಡಕೂಡಲೇ, ಪಾಲಕಿಯಿಂದ ಕೆಳಗೆ ಹಾರಿಹೋಗುವುದನ್ನು ಆ ನಾಯಿಯು ಹೇಗೆ ಬಿಡುವುದಿಲ್ಲವೋ, ಹಾಗೆಯೇ ಶ್ರೇಷ್ಠವಾದ ಮನುಷ್ಯದೇಹವೆಂಬ ಪಾಲಕಿಯಲ್ಲಿ ತಾನಿದ್ದೇನೆಂಬ ಅರಿವು ಈ ಮನಸ್ಸಿಗಿರದೆ ಹೊನ್ನು, ಹೆಣ್ಣು, ಮಣ್ಣು ಮೊದಲಾದ ವಿಷಯಗಳನ್ನು ಕಂಡ ಕೂಡಲೇ ಅವುಗಳ ಕಡೆಗೇನೇ ಹೋಗಿ ಲಿಂಗದೇವನನ್ನು ಮರೆತುಬಿಡುತ್ತದೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ನಾಯಿಯು ಪಾಲಕಿಯಲ್ಲಿ ಕುಳಿತಿದ್ದರೂ ಮಾಂಸವನ್ನು ಕಂಡಕೂಡಲೇ ತನ್ನ ಸ್ವಭಾವಕ್ಕನುಸರಿಸಿ ಹೇಗೆ ಅದರ ಕಡೆಗೆ ಹೋಗುತ್ತದೆಯೋ ಹಾಗೆಯೇ ಈ ಮನಸ್ಸೆಂಬ ನಾಯಿಯು ಕೂಡಾ ನಾನಾ ವಿಷಯಗಳೆಂಬ ಮಾಂಸದ ಕಡೆಗೇನೇ ಹೋಗುತ್ತದೆಯೇ ವಿನಾ ಲಿಂಗದೇವನನ್ನು ಸ್ಮರಿಸುವುದಿಲ್ಲ. ಆದಕಾರಣ ಲಿಂಗದೇವನೇ, ಇದರ ಅವಗುಣವನ್ನು ಜ್ಞಾನಾಗ್ನಿಯಿಂದ ಸುಟ್ಟು ನಿನ್ನ ಚರಣವನ್ನು ಧ್ಯಾನಿಸುವಂತೆ ಮಾಡಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ."

**(೧೨) ತುಪ್ಪದ ಸವಿಗೆ ಅಲಗನೆಕ್ಕುವ ಸೊಣಗನಂತಾಯಿತ್ತೆನ್ನ ಬಾಳುವೆ। ಸಂಸಾರಬಿಡದು ನೊಡೆನ್ನ ಮನವು। ಈ ನಾಯಿತನವ ಮಾಣಿಸು ಕೂಡಲ ಸಂಗಯ್ಯ ನಿಮ್ಮ ಧರ್ಮ॥** ಭಕ್ತ ಸ್ಥಳ ೩೫

**ವಿವರಣೆ**—ಕೆಲಬು ಹಿಡಿದ ಒಂದು ಕತ್ತಿಗೆ ಅದು ಸ್ವಚ್ಛವಾಗಲೆಂದು ಸ್ವಲ್ಪ ತುಪ್ಪವನ್ನು ಹಚ್ಚಿಟ್ಟಾಗ ಯಾವುದಾದರೊಂದು ನಾಯಿಯು ಆ ತುಪ್ಪದ ವಾಸನೆಗೆ ಬಂದು ನೆಕ್ಕಲುಪಕ್ರಮಿಸಿದರೆ ಆಗ ಅದರ ನಾಲಿಗೆಯು ಸೀಳಿ ರಕ್ತ ಹೊರಟರೂ ತನ್ನ ನಾಲಿಗೆಯ ರಕ್ತವೇ ಆ ಕತ್ತಿಗೆ ಹತ್ತಿದೆಯೆಂಬ ಎಚ್ಚರಿಲ್ಲದೆ ಆ ಕತ್ತಿಯಲ್ಲಿಯೇ ರಕ್ತವಿದೆಯೆಂದು ಭ್ರಮಿಸಿ ಪುನಃ ಆ ಕತ್ತಿಯನ್ನು ನೆಕ್ಕಲುಪಕ್ರಮಿಸಿದರೆ ನಾಯಿಯು ಹೇಗೆ ಭಯಂಕರವಾದ ವಿಪತ್ತಿಗೀಡಾಗುತ್ತದೆಯೋ, ಹಾಗೆಯೇ ಈ ಸಂಸಾರದ ಹೊನ್ನು, ಹೆಣ್ಣು, ಮಣ್ಣು ಮೊದಲಾದ ನಾನಾ ವಿಷಯಗಳಲ್ಲಿಯೇ ಸುಖವಿದೆಯೆಂದು ಮೋಹಿಸಿ ಅವುಗಳನ್ನೇ ಅನುಭವಿಸುವಂಥ ಮನುಷ್ಯನು ಘೋರ ದುಃಖಕ್ಕೀಡಾಗುತ್ತಾನೆಂದು ಈ ವಚನದಲ್ಲಿ ವಿವರಿಸಿದ್ದಾರೆ.

"ಈ ನಮ್ಮ ಮನಸ್ಸು ಸಂಸಾರವನ್ನು ಬಿಡಲೊಲ್ಲದು. ಆದಕಾರಣ ತುಪ್ಪದ ರುಚಿಗಾಗಿ ಶಸ್ತ್ರವನ್ನು ನೆಕ್ಕುವ ನಾಯಿಯಂತೆ ನನ್ನ ಬಾಳುವೆಯಾಯಿತು. ಆದುದರಿಂದ ಲಿಂಗದೇವನೇ, ಕೃಪೆಮಾಡಿ ನನ್ನ ಮನಸ್ಸಿನಲ್ಲಿರುವ ಈ ನಾಯಿತನವನ್ನು ನಿವಾರಣೆ ಮಾಡು."

**(೧೩) ಆನು ಒಬ್ಬನು ಸುಡುವರೈವರು| ಮೇಲೆ ಕಿಚ್ಚು ಘನ| ನಿಲಲುಬಾರದು| ಕಾಡಬಸವನ ಹುಲಿಕೊಂಡೊಯಿವರೆ ಆರೈಯ್ಯಲಾಗದೆ ಕೂಡಲ ಸಂಗಮದೇವ? ಭಕ್ತಸ್ಥಳ ೪೫.**

**ವಿವರಣೆ**—ಜೀವನು ತಾನೊಬ್ಬನಾಗಿದ್ದಾನೆ. ಅವನನ್ನು ಪಂಚೇಂದ್ರಿಯಗಳೆಂಬ ೫ ಜನರು ಸುಡುತ್ತಿದ್ದಾರೆ. ಅವರು ಸುಡುತ್ತಿರುವ ರೂಪ, ರಸ, ಗಂಧಾದಿ ವಿಷಯಾಗ್ನಿಯಾದರೋ ಅತ್ಯಂತ ಘನವಾದುದಾಗಿದೆ. ಆದಕಾರಣ ಈ ಪಂಚೇಂದ್ರಿಯಗಳ ಕಾಟವನ್ನು ತಾಳಲಿಕ್ಕಾಗುವುದಿಲ್ಲವೆಂತಲೂ, ಈ ಸಂಸಾರವು ಒಂದು ಘೋರಾರಣ್ಯದಂತಿರುವುದರಿಂದ ಇದರಲ್ಲಿ ಸಂಚರಿಸುತ್ತಿರುವ ಜೀವನೆಂಬ ಪಶುವನ್ನು ಯಮನೆಂಬ ಹುಲಿಯು ಬಂದು ಹಿಡಿದುಕೊಂಡು ಹೋಗುವುದಕ್ಕಿಂತ ಮುಂಚಿತವಾಗಿಯೇ ಈ ಪಶುವನ್ನು ಕಾಪಾಡೆಂತಲೂ ಈ ವಚನದಲ್ಲಿ ವಿವರಿಸಿದ್ದಾರೆ.

“ನಾನು ಒಬ್ಬನು, ನನ್ನನ್ನು ಸುಡುವವರಾದರೋ ಐದು ಜನರು; ಬೆಂಕಿಯೂ ದೊಡ್ಡದಾಗಿದೆ. ಆದಕಾರಣ ಸಿಲ್ಲಲಿಕ್ಕಾಗುವುದಿಲ್ಲ ಅಡವಿಯ ಎತ್ತನ್ನು ಹುಲಿಯು ಹಿಡಿದುಕೊಂಡು ಹೋಗುವುದಕ್ಕಿಂತ ಮುಂಚೆಯೇ ಲಿಂಗದೇವನೇ, ಅದನ್ನು ಕಾಪಾಡಬಾರದೆ?”

**(೧೪) ಒಂದು ಮೊಲಕ್ಕೆ ನಾಯನೊಂಬತ್ತು ಬಿಟ್ಟಂತೆ ಎನ್ನ ಬಿಡು ತನ್ನ ಬಿಡೆಂಬುದು ಕಾಯವಿಕಾರ| ಎನ್ನಬಿಡು ತನ್ನಬಿಡೆಂಬುದು ಮನದ ವಿಕಾರ| ಕರಣೇಂದ್ರಿಯಗಳೆಂಬ ಸೊಣಗ ಮುಟ್ಟದ ಮುನ್ನ ಮನ ನಿಮ್ಮನೈದುಗೆ ಕೂಡಲ ಸಂಗಮದೇವ|| ಭಕ್ತಸ್ಥಳ ೩೬.**

**ವಿವರಣೆ**—ಜೀವನೆಂಬ ಮೊಲಕ್ಕೆ ಪಂಚೇಂದ್ರಿಯ (ಕಣ್ಣು, ಮೂಗು, ನಾಲಿಗೆ, ಕಿವಿ, ಚರ್ಮ) ಮತ್ತು ಅಂತಃಕರಣ ಚತುಷ್ಟಯ, (ಮನ, ಬುದ್ಧಿ, ಚಿತ್ತ, ಅಹಂಕಾರ) ಗಳೆಂಬ ಒಂಬತ್ತು ನಾಯಿಗಳು ಬೆನ್ನು ಹತ್ತಿ ನಾಮುಂದೆ ತಾಮುಂದೆ ಎಂದು ಮೊಲದಂತಿರುವ ಜೀವವನ್ನು ಹಿಡಿಯಬೇಕೆಂದು ಪ್ರಯತ್ನಿಸುತ್ತಲಿವೆ. ಆದಕಾರಣ ಇಂದ್ರಿಯಗಳ ಅಥವಾ ಅಂತಃಕರಣಗಳ ವಿಕಾರಗಳಿಗೆ ಜೀವನು ಆಹುತಿಯಾಗುವುದಕ್ಕಿಂತ ಪೂರ್ವದಲ್ಲಿಯೇ ಮನಸ್ಸನ್ನು ಅವುಗಳಿಂದ ಬಿಡಿಸಿ ನಿಮ್ಮ ಕಡೆಗೆ ಕರೆದುಕೊಳ್ಳಿರೆಂದು ಲಿಂಗದೇವರನ್ನು ಕುರಿತು ಈ ವಚನದಲ್ಲಿ ಪ್ರಾರ್ಥಿಸಿಕೊಂಡಿದ್ದಾರೆ.

“ಒಂದು ಮೊಲಕ್ಕೆ ಒಂಬತ್ತು ನಾಯಿಗಳನ್ನು ಬಿಟ್ಟಾಗ ನಾ ಮುಂದೆ ತಾ ಮುಂದೆಯೆಂದು ಆ ನಾಯಿಗಳು ಹೇಗೆ ಓಡಿ ಹೋಗುತ್ತವೆಯೋ, ಹಾಗೆಯೇ

ಇಂದ್ರಿಯ ಮತ್ತು ಅಂತಃಕರಣಗಳ ವಿಕಾರಗಳೆಂಬ ನಾಯಿಗಳು ನಾ ಮುಂದೆ ತಾ ಮುಂದೆ ಎಂದು ಬರುತ್ತಲಿವೆ. ಆದಕಾರಣ ಲಿಂಗದೇವನೇ ಈ ನಾಯಿಗಳು ಬಂದು ಹಿಡಿಯುವದಕ್ಕಿಂತ ಮುಂಚಿತವಾಗಿಯೇ ಮನಸ್ಸು ನಿನ್ನನ್ನು ಸೇರಲಿ."

(೧೫) **ಬಡಪಶು ಪಂಕದಲ್ಲಿ ಬಿದ್ದರೆ ಕಾಲಬಡಿಯುವದಲ್ಲದೆ ಬೇರೆ ಗತಿಯುಂಟೆ? ಶಿವಶಿವ! ಹೋದಿಹೆನಯ್ಯ! ನಿಮ್ಮ ಮನದತ್ತಲೆನ್ನ ತೆಗೆಯಯ್ಯ! ಪಶು ನಾನು! ಪಶುಪತಿ ನೀನು! ತುಡುಗುಣಿಯೆಂದೆನ್ನ ಹಿಡಿದು ಬಡಿಯದ ಮುನ್ನ ಒಡೆಯ ನಿಮ್ಮ ಬೈಯ್ಯದಂತೆ ಮಾಡು ಕೂಡಲ ಸಂಗಮದೇವ||** ಭಕ್ತಸ್ಥಳ ೫೩.

**ವಿವರಣೆ**—ಸಂಸಾರವು ಒಂದು ದೊಡ್ಡದಾದ ಕೆಸರಿನ ಮಡುವಿನಂತಿದೆ ಯೆಂತಲೂ, ಇದರಲ್ಲಿ ಭಕ್ತಿ ಇಲ್ಲದೆ ಕ್ಷೀಣವಾದ ಜೀವವೆಂಬ ಪಶು ಸಿಕ್ಕಿಕೊಂಡಿ ರುವುದರಿಂದ ಮೇಲಕ್ಕೆ ಬರಲು ಸಾಧ್ಯವಿಲ್ಲದೆ ಒದ್ದಾಡುತ್ತ ವಿಷಯಗಳೆಂಬ ಕೆಸರಿ ನಲ್ಲಿಯೇ ಮುಳುಗುತ್ತಿರುವ ಕಾರಣ ಮೇಲಕ್ಕೆತ್ತಿ ತೆಗೆಯಬೇಕೆಂತಲೂ, ತುಡುಗು ಮೇಯುವ ಪಶುವನ್ನು ಹಿಡಿದು ಹೊಡೆಯುತ್ತಿರುವಾಗ ಅದನ್ನು ಸಾಕಿದ ಯಜ ಮಾನನಿಗೆ ಹೇಗೆ ಬಯ್ಯುತ್ತಾರೆಯೋ ಹಾಗೆಯೇ ಜೀವನೆಂಬ ಪಶು ವಿಷಯಗಳ ಸೇವನೆಯೆಂಬ ತುಡುಗು ಮೇಯುವುದನ್ನು ಕಾಲ-ಕಾಮರು ಕಂಡು ಚೆನ್ನಾಗಿ ಶಿಕ್ಷಿಸುತ್ತ ಜೀವನ ಯಜಮಾನನಾದ ಶಿವನಿಗೂ ಬೈಯುತ್ತಾರೆ. ಆದಕಾರಣ ಇಂಥ ಸ್ಥಿತಿಯು ನನಗೂ ಮತ್ತು ನಿನಗೂ ಬರದಂತೆ ಮಾಡೆಂದು ಲಿಂಗದೇವ ನನ್ನು ಈ ವಚನದಲ್ಲಿ ಪ್ರಾರ್ಥಿಸಿಕೊಂಡಿದ್ದಾರೆ.

"ಶಕ್ತಿಯಿಲ್ಲದ ಪಶುವು ಕೆಸರಿನಲ್ಲಿ ಬಿದ್ದರೆ ಕಾಲು ಬಡಿವುದಲ್ಲದೆ ಹೇಗೆ ಮೇಲಕ್ಕೆದ್ದು ಬರಲಾರದೆ ಮತ್ತೂ ಕೆಸರಿನಲ್ಲಿಯೇ ಹೋಗುತ್ತದೆಯೋ ಹಾಗೆಯೇ ಶಿವನೇ, ಪಶುವಾದ ನಾನು ಭಕ್ತಿಯ ಶಕ್ತಿಯಿಲ್ಲದ್ದರಿಂದ ವಿಷಯಗಳಲ್ಲಿ ಮುಳುಗಿ ಹೋಗುತ್ತಲಿದ್ದೇನೆ. ಆದಕಾರಣ ನಿಮ್ಮ ಕಡೆಗೆ ನನ್ನನ್ನು ತೆಗೆದುಕೊಳ್ಳಿರಿ. ಏಕೆಂದರೆ, ಪಶುವಾದ ನನಗೆ ನೀವು, ಪತಿಗಳಲ್ಲವೆ? ಕಳ್ಳದನವನ್ನು ಹೊಡೆ ಯುವಂತೆ ವಿಷಯಗಳನ್ನನುಭವಿಸಲು ಹೋಗುತ್ತಿರುವ ನನ್ನನ್ನು ಕಾಲ-ಕಾಮರು ಶಿಕ್ಷಿಸುವುದಕ್ಕಿಂತ ಮುಂಚೆ ನನಗೆ ತಂದೆಯಾದ ಲಿಂಗದೇವನೇ, ಎಂಥ ವಿಷಯ ಲಂಪಟೆಯನ್ನು ಶಿವನು ಹುಟ್ಟಿಸಿದನಲ್ಲಾ! ಎಂದು ನಿಮ್ಮನ್ನು ಬೈಯ್ಯದಂತೆ ನನ್ನ ಮೇಲೆ ಕೃಪೆ ಮಾಡು."

**(೧೬) ಮುನಿದೆಯಾದೊಡೆ ಒಮ್ಮೆ ಜರಿದೊಡೆ ಸಾಲದೇ? ಅಕಟ ಕಟಾ! ಮದನಂಗೆ ಮಾರಗೊಡುವರೆ? ಹಗೆಗೆ ಮಾರಗೊಟ್ಟು ನಿನ್ನವರ ನೊಪ್ಪಿಸುವರೆ ಕೂಡಲಸಂಗಮದೇವ||** **ಭಕ್ತ ಸ್ಥಳ ೪೪**

**ವಿವರಣೆ**—ಜೀವನು ಶಿವನಸ್ವರೂಪವೇ ಆಗಿರುವುದರಿಂದ ಶಿವನು ತನ್ನವನಾದ ಜೀವನನ್ನು ಆತನಿಗೆ ವೈರಿಯಾಗಿರುವ ಕಾಮನ ಆಧೀನ ಮಾಡಿರುವುದರಿಂದ ಜೀವನು ನಾನಾ ದುಃಖಗಳಿಗೀಡಾಗಿದ್ದಾನೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ಲಿಂಗದೇವನೇ, ನೀನು ನನ್ನಮೇಲೆ ಸಿಟ್ಟಾಗಿದ್ದರೆ ಒಮ್ಮೆ ಜರಿದೊಡೆ ಸಾಲದೆ? ಎಂದರೆ ಒಮ್ಮೆ ದುಃಖಕ್ಕೀಡುಮಾಡಿದ್ದರೆ ಸಾಕಾಗುತ್ತಿರಲಿಲ್ಲವೇ? ಅಯ್ಯೋ! ಈ ಪ್ರಕಾರ ಕಾಮನಿಗೆ ನನ್ನನ್ನು ಮಾರಿಬಿಡಬಹುದೆ? ಎಂದರೆ ಯಾವಾಗಲೂ ನಾನಾ ವಿಷಯೋಪಭೋಗಗಳಿಂದುಂಟಾಗುವ ದುಃಖಗಳಲ್ಲಿಯೇ ಇರುವಂತೆ ಮಾಡಬಹುದೆ? ನಿನ್ನವನಾದ ನನ್ನನ್ನು ಈ ಪ್ರಕಾರ ವೈರಿಯಾದ ಕಾಮನಿಗೆ ಮಾರಿ ಆತನಿಗೆ ಒಪ್ಪಿಸಬಹುದೆ?"

**(೧೭) ಅಕಟಕಟಾ ನಿನಗಿನಿತು ಕರುಣವಿಲ್ಲ| ಅಕಟಕಟಾ ಶಿವ ನಿನಗಿನಿತು ಕೃಪೆಯಿಲ್ಲ| ಯಾಕೆ ಹುಟ್ಟಿಸಿದೆ ಇಹಲೋಕ ದುಃಖಿಯ ಪರಲೋಕ ದೂರನ? ಯಾಕೆ ಹುಟ್ಟಿಸಿದೆ ಕೂಡಲ ಸಂಗಮದೇವ? ಕೇಳಯ್ಯ ಎನಗಾಗಿ ಮತ್ತೊಂದು ತರುಮರಂಗಳಿದ್ದಿಲ್ಲವೇ? ಭಕ್ತ ಸ್ಥಳ ೬೪.**

**ವಿವರಣೆ**—ಯಾವಾತನು ಕಾಮನವಶನಾಗಿ ನಾನಾ ವಿಷಯೋಪಭೋಗಗಳಲ್ಲಿರುತ್ತಾನೆಯೋ, ಆತನು ಆಶಾಪಾಶದಿಂದ ಕಟ್ಟಲ್ಪಟ್ಟು ಬಹು ದುಃಖಿಯಾಗುತ್ತಾನೆ. ಈ ಪ್ರಕಾರ ವಿಷಯಲೋಲುಪ್ತನಾದ ಇಹಲೋಕದ ದುಃಖಿಗೆ ಪರಲೋಕದಲ್ಲಿ ಸುಖವು ಹೇಗೆ ತಾನೆ ದೊರಯುವುದು? ಇಂಥ ಇಹಪರಗಳೆರಡನ್ನೂ ಕಳೆದುಕೊಳ್ಳುವ ಮನುಷ್ಯನು ಗಿಡಮರಗಳಿಗಿಂತಲೂ ಕಡಿಮೆಯಾದವನೆಂದು ಮಹಾನುಭಾವರು ಹೇಳಿದ್ದಾರೆ. ಏಕೆಂದರೆ, ಗಿಡ ಮರಗಳಿಗೆ ನೀರು ಹಾಕಿ ಬೆಳಸಿದರೆ ಅವು ನೆರಳು, ಫಲ, ಪುಷ್ಪಗಳನ್ನಾದರೂ ಪ್ರಾಣಿಗಳಿಗೆ ಕೊಟ್ಟು ಉಪಕಾರ ಮಾಡುತ್ತವೆ. ಆದರೆ ಇಹಪರಗಳಿಗೆ ದೂರಾಗುವಂಥ ನಡತೆಗಳಲ್ಲಿರುವ ಮನುಷ್ಯನಿಂದ ಯಾವ ಪ್ರಾಣಿಗೂ ಪ್ರಯೋಜನವಾಗುವುದಿಲ್ಲವಾದುದರಿಂದ ಅಂಥವನ ಜನ್ಮವು ಗಿಡಮರಗಳಿಗಿಂತಲೂ ಕನಿಷ್ಟವಾದುದೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ಇಹಲೋಕದಲ್ಲಿ ದುಃಖಿಯಾಗಿರುವಂಥ ಮತ್ತು ಪರಲೋಕ ಸುಖವನ್ನು ಹೊಂದದಂಥ ನನ್ನನ್ನು ಶಿವನೇ ಏಕೆ ಹುಟ್ಟಿಸಿದೆ? ಅಯ್ಯೋ! ನಿನಗೆ ಸ್ವಲ್ಪವಾದರೂ ಕರುಣವಿಲ್ಲವೆ? ಅಯ್ಯೋ! ನಿನ್ನಲ್ಲಿ ಕೃಪಾ ಸಾಮರ್ಥ್ಯವು ಸ್ವಲ್ಪವಾದರೂ ಇಲ್ಲವೇ? ಶಿವನೇ, ನನ್ನನ್ನು ಏಕೆ ಹುಟ್ಟಿಸಿದೆ? ನನ್ನನ್ನು ಹುಟ್ಟಿಸುವದಕ್ಕಿಂತ ಗಿಡಮರಗಳನ್ನಾದರೂ ಹುಟ್ಟಿಸಬಾರದಾಗಿದ್ದಿತೇ?"

(೧೮) **ಸಮುದ್ರದೊಳಗಣ ಸಿಂಪಿನಂತೆ ಬಾಯಿ ಬಿಡುತ್ತಲಿದ್ದೇನಯ್ಯಾ| ನೀವಲ್ಲದೆ ಮತ್ತಾರೂ ಎನ್ನವರಿಲ್ಲ ನೋಡಯ್ಯಾ| ಕೂಡಲಸಂಗಮದೇವ ನೀವಲ್ಲದೊಳಕೊಂಬುವವರಿಲ್ಲ ನೋಡಯ್ಯಾ||** ಭಕ್ತಸ್ಥಳ ೫೫,

ವಿವರಣೆ— ಸಮುದ್ರದಲ್ಲಿರುವ ಸಿಂಪಿಯು ಸ್ವಾತಿಮಳೆಯ ನೀರನ್ನೇ ಹಾರೈಸುತ್ತಾ ಹೇಗೆ ಬಾಯಿ ಬಿಡುತ್ತಿರುತ್ತದೆಯೋ, ಹಾಗೆಯೇ ಈ ಸಂಸಾರವೆಂಬ ಸಮುದ್ರದಲ್ಲಿರುವ ಜೀವನೆಂಬ ಸಿಂಪಿಯು ಪರಮಾತ್ಮನೆಂಬ ಸ್ವಾತಿಯ ಕೃಪೆಯೆಂಬ ಜಲವನ್ನೇ ನಿರೀಕ್ಷಿಸುತ್ತಾ ಇದೆ. ಏಕೆಂದರೆ, ಸಿಂಪಿಗೆ ಮುತ್ತನ್ನುಂಟುಮಾಡಿ ಕೊಡಲು ಸ್ವಾತಿ ನೀರಿನ ವಿನಾ ಹೇಗೆ ಬೇರೆ ನೀರಿನಲ್ಲಿ ಆ ಸಾಮರ್ಥ್ಯವಿಲ್ಲವೋ, ಹಾಗೆಯೇ ಜೀವನಿಗೆ ಮೋಕ್ಷವನ್ನು ಕೊಡಲು ಪರಮಾತ್ಮನ ವಿನಾ ಅನ್ಯರಾರೂ ಸಮರ್ಥರಲ್ಲವೆಂಬ ಸಂಗತಿಯನ್ನು ಈ ವಚನದಲ್ಲಿ ವಿವರಿಸಿದ್ದಾರೆ,

"ಸಮುದ್ರದಲ್ಲಿ ಸಿಂಪಿಯು ಹೇಗೆ ಬಾಯಿ ಬಿಡುತ್ತಾ ಇರುತ್ತದೆಯೋ, ಹಾಗೆಯೇ ನಾನು 'ಶಿವ! ಶಿವ!' ಎಂದು ಬಾಯಿ ಬಿಡುತ್ತಿದ್ದೇನೆ, ಲಿಂಗದೇವನೆ, ಈ ಸಂಸಾರ ಸಮುದ್ರದಲ್ಲಿ ನೀನಲ್ಲದೆ ನನಗೆ ಇನ್ನಾರೂ ನನ್ನವರಿಲ್ಲ. ಆದಕಾರಣ ನಿಮ್ಮ ವಿನಾ ನನ್ನನ್ನ ಎತ್ತಿಕೊಳ್ಳುವವರೂ ಇಲ್ಲ."

(೧೯) **ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವದಯ್ಯಾ| ಚಂದ್ರ ಕುಂದೆ ಕುಂದುವದಯ್ಯಾ| ಚಂದ್ರಂಗೆ ರಾಹು ಅಡ್ಡ ಬಂದಲ್ಲಿ ಅಂಬುಧಿ ಬೊಬ್ಬಿಟ್ಟಿತ್ತೇ? ಅಂಬುಧಿಯ ಮುನಿ ಆಪೋಶನವಕೊಂಡಲ್ಲಿ ಚಂದ್ರಮ ನೇನಡ್ಡಬಂದನೆ? ಆರಿಗಾರು ಇಲ್ಲ| ಕೆಟ್ಟವಂಗೆ ಕೆಳೆಯಿಲ್ಲ| ಜಗದ ನಂಟ ನೀನೆ ಅಯ್ಯಾ ಕೂಡಲ ಸಂಗಮದೇವ||** ಭಕ್ತಸ್ಥಳ ೨೫.

ವಿವರಣೆ—ಈ ಸಂಸಾರದಲ್ಲಿ ನಾನಾ ವಿಷಯಗಳಿಗೀಡಾಗಿ ಕೆಟ್ಟು ಹೋಗುತ್ತಿರುವ ಜೀವನಿಗೆ ನಿಜವಾದ ಸ್ನೇಹಿತರಾರೂ ಇಲ್ಲ. ಪ್ರಾಣಿಗಳು ದುಃಖದಿಂದ ಪಾರಾಗಲು ನಿಜವಾದ ಸಹಾಯ ಮಾಡತಕ್ಕವನು ಪರಮಾತ್ಮನೊಬ್ಬನೇ ವಿನಾ ಇನ್ನಾರೂ ಸಹಾಯಕರಿಲ್ಲವೆಂದು ಈ ವಚನದಲ್ಲಿ ವಿವರಿಸಿದೆ.

"ಚಂದ್ರನು ಶುದ್ಧ ಪಕ್ಷದಲ್ಲಿ ಕಳೆಗಳನ್ನು ಹೆಚ್ಚುಹೆಚ್ಚಾಗಿ ಹೊಂದುತ್ತಾ ಹೋಗುವಂತೆ ಸಮುದ್ರವೂ ಹೆಚ್ಚು ಹೆಚ್ಚು ಉಕ್ಕೇರಿ ಬರುತ್ತದೆ. ಚಂದ್ರನು ಕೃಷ್ಣಪಕ್ಷದಲ್ಲಿ ಕುಂದುತ್ತಾ ಹೋಗುವಂತೆ ಸಮುದ್ರವೂ ಇಳಿಯುತ್ತಾ ಬರುತ್ತದೆ. ಇದರ ಮೇಲಿಂದ ಚಂದ್ರನಿಗೂ ಸಮುದ್ರಕ್ಕೂ ಬಹು ಸ್ನೇಹವಿದ್ದಂತೆ ತೋರುತ್ತದಷ್ಟೆ. ಆದರೆ ಚಂದ್ರನನ್ನು ರಾಹು ಬಂದು ಹಿಡಿಯಲು ಸಮುದ್ರವೇನಾದರೂ ಕೂಗಿಕೊಂಡು ಬಂದು ಚಂದ್ರನನ್ನು ಬಿಡಿಸುತ್ತದೆಯೇ? ಸಮುದ್ರವನ್ನು ಅಗಸ್ತ್ಯ ಋಷಿಗಳು ಒಂದು ಗುಟುಕು ಮಾಡಿ ಕುಡಿಯುತ್ತಿದ್ದಾಗ ಚಂದ್ರನೇನಾದರೂ ಬಂದು ಸಮುದ್ರವನ್ನು ಬಿಡಿಸಿಕೊಂಡನೆ? ಇಲ್ಲವೇ ಇಲ್ಲ, ಆದಕಾರಣ ಈ ಸಂಸಾರದಲ್ಲಿ ಯಾರಿಗೆ ಯಾರೂ ಸಹಾಯಕರಿಲ್ಲ. ಕೆಟ್ಟು ಹೋದವರಿಗೆ ಯಾರೂ ಸ್ನೇಹಿತರಿಲ್ಲ. ಲಿಂಗದೇವನೇ, ನೀನೊಬ್ಬನೇ ಈ ಜಗತ್ತಿನ ಎಲ್ಲಾ ಪ್ರಾಣಿಗಳಿಗೂ ನೆಂಟನಾಗಿರುವಿ"

**(೨೦) ನರ ಕೂರಂಬಿನಲೆಚ್ಚುವಂಗೊಲಿದೆ ಅಯ್ಯ! ಅರಳಂಬಿನಲೆಚ್ಚ ಕಾಮನನುರುಹಿದೆ ಅಯ್ಯ! ಇರುಳು ಹಗಲೆನ್ನದೆ ಪ್ರಾಣಹತಗಳ ಮಾಡಿದ ಬೇಡನ ಕೈಲಾಸಕೊಯ್ದೆ ಅಯ್ಯ! ಎನ್ನನೇತಕೊಲ್ಲೆ ಕೂಡಲ ಸಂಗಮದೇವ||** ಭಕ್ತ ಸ್ಥಳ ೬೫.

ವಿವರಣೆ—ಈ ಸಂಸಾರ ಸಮುದ್ರದಿಂದ ಪಾರು ಮಾಡುವಾತನು ಪರಮಾತ್ಮನೊಬ್ಬನೇ ಸರಿಯೆಂದು ಆತನನ್ನು ಎಷ್ಟೇ ಕೊಂಡಾಡಿದರೂ ಪರಮಾತ್ಮನ ಕೃಪೆಯಾಗದಿರುವಾಗ ತನಗೆ ದೇವರ ಒಲಿಮೆಯು ಏಕಾಗಲೊಲ್ಲದೆಂಬ ಚಿಂತೆಯುಂಟಾಗಿ ದೇವರ ಕೃಪಾವಕೃಪೆಗಳ ರಹಸ್ಯವೇ ತಿಳಿಯದ ಸ್ಥಿತಿಯು ಪ್ರಾಪ್ತವಾಗುವುದುಂಟು ಆ ವಿಷಯವೇ ಈ ವಚನದಲ್ಲಿ ಉದಾಹರಿಸಲ್ಪಟ್ಟಿದೆ.

"ಅರ್ಜುನನು ತೀಕ್ಷ್ಣವಾದ ಬಾಣಗಳಿಂದ ಹೊಡೆದರೂ ಶಿವನೇ, ನೀನು ಆತನಿಗೆ ಮೆಚ್ಚಿದೆ. ಆದರೆ ಕಾಮನು ಹೂವಿನ ಬಾಣಗಳಿಂದ ನಿನಗೆ ಹೊಡೆಯಲು ಆತನನ್ನು ಸುಟ್ಟುಬಿಟ್ಟೆ. ಕಾಡಿನಲ್ಲಿ ಯಾವಾಗಲೂ ಬೇಟೆಯಾಡುತ್ತ ನಾನಾ ಪ್ರಾಣಿಗಳನ್ನು ಕೊಲ್ಲುತ್ತಿದ್ದ ಬೇಡರ ಕಣ್ಣಪ್ಪಯ್ಯನಿಗೆ ಮೆಚ್ಚಿ ಆತನನ್ನು ಕೈಲಾಸಕ್ಕೆ ತೆಗೆದುಕೊಂಡು ಹೋದೆ. ಆದರೆ ನಾನು ನಿನ್ನನ್ನು ಕೊಂಡಾಡುತ್ತೇನೆ; ನಿನ್ನಲ್ಲಿಯೇ ಮೊರೆಯಿಡುತ್ತಿದ್ದೇನೆ. ಹೀಗಿದ್ದರೂ ನೀನು ನನಗೇಕೆ ಮೆಚ್ಚುವುದಿಲ್ಲ?"

# ೨ನೆಯ ಅಧ್ಯಾಯ.



**(೨೧) ಹಾವಿನ ಬಾಯ ಕಪ್ಪೆ ಹಸಿದು ಹಾರುವ ನೊಣಕ್ಕೆ ಆಸೆಮಾಡುವಂತೆ ಶೂಲವನೇರುವ ಕಳ್ಳ ಹಾಲು ತುಪ್ಪ ಕುಡಿದು ಮೇಲೇಸು ಕಾಲ ಬದುಕುವನೋ। ಕೆಡುವೊಡಲ ನೆಚ್ಚಿ ಕಡು ಹುಸಿಯನೆ ಹುಸಿದು। ಒಡಲ ಹೊರೆವರ ಕೂಡಲಸಂಗಮದೇವಯ್ಯನವರ ನೊಲ್ಲನಯ್ಯ॥** ಭಕ್ತ ಸ್ಥಳ ೧೩೦

**ವಿವರಣೆ**—ಸಂಸಾರದಲ್ಲಿ ಕಷ್ಟಪಟ್ಟು ಮನಸ್ಸಿನ ಉಪಟಳವನ್ನು ತಾಳಲಾರದೆ ಈ ದುಃಖವು ಪರಮಾತ್ಮನ ವಿನಾ ಅನ್ಯರಿಂದ ನಿವಾರಣೆಯಾಗುವುದಿಲ್ಲವೆಂದು ನಂಬಿ ಆತನಲ್ಲಿ ಮೊರೆಯಿಟ್ಟರೂ ಮನುಷ್ಯನಿಗೆ ಪರಮಾತ್ಮನೊಲಿಮೆಯು ಏಕೆ ಲಭಿಸುವುದಿಲ್ಲವೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ಹಾವಿನ ಬಾಯಿಯಲ್ಲಿ ಸಿಕ್ಕಿಕೊಂಡ ಕಪ್ಪೆಯು ತನ್ನಮುಂದೆ ಹಾರುತ್ತಿರುವ ನೊಣವನ್ನು ಹಿಡಿದು ತಿಂದು ತನಗಾಗಿರುವ ಹಸಿವೆಯನ್ನು ಕಳೆದುಕೊಳ್ಳಬೇಕೆಂದಪೇಕ್ಷಿಸುವುದು ಹೇಗೆ ವ್ಯರ್ಥವಾದುದಾಗಿದೆಯೋ ಹಾಗೆಯೇ ಯಮನೆಂಬ ಹಾವಿನ ಬಾಯಿಯಲ್ಲಿ ಸಿಕ್ಕಿಕೊಂಡ ಮನುಷ್ಯನೆಂಬ ಕಪ್ಪೆಯು ಪ್ರಾಪಂಚಿಕ ವಿಷಯವೆಂಬ ನೊಣವನ್ನು ತಿಂದು ತನಗುಂಟಾಗಿರುವ ವಿಷಯೋಪಭೋಗದ ಹಸಿವೆಯನ್ನು ಕಳೆದುಕೊಳ್ಳಬೇಕೆಂದಿಚ್ಛಿಸುವದು ವ್ಯರ್ಥವಾದುದಾಗಿದೆ. ಈಗ ತಾನೇ ಶೂಲವನ್ನೇರಬೇಕಾಗಿದೆಯೆಂದು ತಿಳಿದುಕೊಂಡ ಕಳ್ಳನು ಹಾಲು ತುಪ್ಪಗಳನ್ನು ಕುಡಿದರೂ ಹೇಗೆ ಆತನು ಮರಣದಿಂದ ಬದುಕಿ ಪುಷ್ಟನಾಗುವುದಿಲ್ಲವೋ, ಹಾಗೆಯೇ ಜೀವನೆಂಬ ಕಳ್ಳನು ಮರಣವೆಂಬ ಶೂಲವನ್ನು ಏರಬೇಕಾಗಿದೆಯೆಂದರಿತಿದ್ದರೂ ಅಷ್ಟರಲ್ಲಿಯೇ ಹೊನ್ನು, ಹೆಣ್ಣು ಮೊದಲಾದ ಭೋಗ ಪದಾರ್ಥಗಳೆಂಬ ಹಾಲು ತುಪ್ಪಗಳನ್ನನುಭವಿಸಿದರೆ ಆತನು ಮರಣದಿಂದ ಬಿಡುಗಡೆಯಾಗುವದಿಲ್ಲ. ಇವುಗಳ ಜ್ಞಾನವಿಲ್ಲದೆ ಯಾವಾತನು ಈ ಕೆಟ್ಟುಹೋಗುವ ದೇಹವನ್ನು ಮೆಚ್ಚಿ ಬಹು ಸುಳ್ಳುಮಾತುಗಳನ್ನಾಡುತ್ತ ಇದನ್ನು ರಕ್ಷಿಸಿಕೊಳ್ಳುತ್ತಾನೆಯೋ ಆತನಿಗೆ ಲಿಂಗದೇವನು ಒಲಿಯುವುದಿಲ್ಲ."

**(೨೨) ಮನವೇ ಸರ್ಪ। ತನುವೇ ಹೇಳಿಗೆ। ಹಾವಿನೊಡತಣವ ಹುದುವಾಳಿಗೆ। ಇನ್ನಾವಾಗ ಕೊಂದಿಹುದೆಂದರಿಯೆ ಇನ್ನಾವಾಗ ತಿಂದಿ**

**ಹುದೆಂದರಿಯೆ| ನಿಚ್ಚ ನಿಚ್ಚಕೆ ನಿಮ್ಮ ಪೂಜಿಸಬಲ್ಲೊಡೆ ಅದೇ ಗಾರುಡ ಕೂಡಲ ಸಂಗಮದೇವ||** ಭಕ್ತ ಸ್ಥಳ ೧೬೦.

**ವಿವರಣೆ**—ಮನಸ್ಸು ದುರ್ವಿಷಯಗಳ ಕಡೆಗೆ ಹೋಗಬಾರದೆಂದಿದ್ದರೆ ಸದ್ವಿಷಯಗಳಾದ ದೇವಪೂಜೆ, ಭಕ್ತರಸೇವೆ ಮೊದಲಾದವುಗಳಲ್ಲಿಯೇ ಅದನ್ನಿರಿಸಬೇಕು. ಏಕೆಂದರೆ, ಮನಸ್ಸು ಒಂದೇ ಕಾಲದಲ್ಲಿ ಒಂದೇ ವಿಷಯದಲ್ಲಿರಬಲ್ಲದು. ಮೊದಲೇ ಅದನ್ನು ಸದ್ವಿಷಯಗಳಲ್ಲಿರಿಸಿಬಿಟ್ಟರೆ ದುರ್ವಿಷಯಗಳ ಕಡೆಗೆ ಹೋಗುವದು ತಾನಾಗಿಯೇ ತಪ್ಪಿ ಹೋಗುತ್ತದೆ. ಆನೆಯು ಬೇರೆ ಪದಾರ್ಥಗಳನ್ನು ಹಿಡಿಯದಂತೆ ಮಾಡುವದಕ್ಕಾಗಿ ಮಾವುತನು ಅದರ ಸೊಂಡಿಲಿನಲ್ಲಿ ಮೊದಲೇ ಅಂಕುಶವನ್ನು ಹೇಗೆ ಕೊಡುತ್ತಾನೆಯೋ ಹಾಗೆಯೇ ಈ ಮನಸ್ಸು ದೇಹಸಂಬಂಧವಾದ ವಿಷಯಗಳಲ್ಲಿ ಹೋಗಬಾರದೆಂದಿದ್ದರೆ ದೇವಪೂಜೆ, ಧ್ಯಾನ, ಶರಣಸೇವೆ ಮೊದಲಾದ ಯಾವುದಾದರೊಂದು ಸದ್ವಿಷಯದಲ್ಲಿಯೇ ಅದು ಮಗ್ನವಾಗುವಂತೆ ಮಾಡಬೇಕು.

"ಪಂಚ ವಿಷಯಗಳೆಂಬ ಐದು ಹೆಡೆಗಳ ಮನಸ್ಸೆಂಬ ಸರ್ಪವು ಈ ದೇಹವೆಂಬ ಬುಟ್ಟಿಯಲ್ಲಿ ವಾಸವಾಗಿದೆ. ಜೀವನು ಈ ಘೋರ ಸರ್ಪನ ಸಹವಾಸದಲ್ಲಿದ್ದಾನೆ. ಆದಕಾರಣ ವಿಷಯಗಳೆಂಬ ವಿಷದಿಂದ ಒಳಲಿ ಕಾಲಾಧೀನನಾಗಬೇಕಾಗುತ್ತದೆ. ಈ ಸರ್ಪವು ಜೀವನನ್ನು ಯಾವಾಗ ಕಚ್ಚುವದೋ ನಿಯಮವಿಲ್ಲ. ಮತ್ತು ಯಾವಾಗ ಕೊಲ್ಲುವದೆಂಬುದೂ ಗೊತ್ತಿಲ್ಲ. ಆದುದರಿಂದ ಈ ಮನಸ್ಸೆಂಬ ಸರ್ಪನಿಂದ ಜೀವನಿಗೆ ಅಪಾಯ ಸಂಭವಿಸಬಾರದೆಂದಿದ್ದರೆ ಪ್ರತಿನಿತ್ಯ ಲಿಂಗದೇವನನ್ನು ಪೂಜಿಸುತ್ತಿರಬೇಕು. ಆ ಲಿಂಗಪೂಜೆಯೇ ಗರುಡ ಮಂತ್ರವಾಗಿರುವುದರಿಂದ ಮನಸ್ಸೆಂಬ ಸರ್ಪವು ಜೀವವನ್ನು ಕಚ್ಚುವುದಿಲ್ಲ."

**(೨೩) ನೀರಬಬ್ಬುಳಿಕೆಗೆ ಕಬ್ಬುನದ ಕಟ್ಟು ಕೊಟ್ಟು ಸುರಕ್ಷಿತ ಮಾಡುವ ಭರವ ನೋಡಾ| ಮಹಾದಾನಿ ಕೂಡಲ ಸಂಗಯ್ಯನ ಪೂಜಿಸಿ ಬದುಕೋ ಕಾಯುವ ನಿಶ್ಚಯಿಸದೆ||** ಭಕ್ತ ಸ್ಥಳ ೧೬೨

**ವಿವರಣೆ** — ದೇವಪೂಜೆ ಮೊದಲಾದ ಸತ್ಕಾರ್ಯಗಳನ್ನು ಮುಂದೆ ಮಾಡೋಣವೆಂದು ಕಾಲ ಕಳೆಯಬಾರದು. ಏಕೆಂದರೆ, ಈ ದೇಹವು ಯಾವಾಗ ನಷ್ಟವಾಗುವದೋ ನಿಶ್ಚಯವಿಲ್ಲ. ಆದಕಾರಣ ಪರಮಾತ್ಮನ ಪೂಜೆ ಧ್ಯಾನಾದಿಗಳಲ್ಲಿ ಈಗಲೇ ಆಸಕ್ತರಾದರೆ ಪರಮಾತ್ಮನಲ್ಲಿ ಸೇರುವರು. ಆಗಲೇ ಅವರ ಬದುಕಿದಂತಾಗುವದು. ಇಲ್ಲದಿದ್ದರೆ ಜನನ ಮರಣಗಳಿಗೆ ಗುರಿಯಾಗಿ ಯಾವಾಗಲೂ ಸಾಯುತ್ತಿರಬೇಕಾಗುವದು

"ನೀರ ಗುಳ್ಳೆಯು ಬಹುಕಾಲ ಇರಲೆಂದು ಅದಕ್ಕೆ ಕಬ್ಬಿಣದ ಕಟ್ಟನ್ನು ಹಾಕಹೋದರೆ ಆ ಗುಳ್ಳೆಯು ಹೇಗೆ ಸುರಕ್ಷಿತವಾಗಿರಲಾರದೋ, ಹಾಗೆಯೇ ಸಪ್ತ ಧಾತುಗಳಿಂದುಂಟಾದ ಈ ದೇಹವನ್ನು ನಾನಾ ಭೋಗ್ಯ ವಸ್ತುಗಳಿಂದ ಜೋಪಾನ ಮಾಡಹೋದರೆ ಈ ದೇಹವು ಬದುಕಲಾರದು. ಆದುದರಿಂದ ಈ ದೇಹವು ಬಹುಕಾಲ ಬದುಕುತ್ತದೆಂದು ತಿಳಿಯದೆ, ಲಿಂಗದೇವನನ್ನು ಪೂಜಿಸಿ ಮೋಕ್ಷವನ್ನು ಹೊಂದು."

(೨೪) **ಪಂಜರ ಬಲ್ಲಿತ್ತೆಂದು ಅಂಜದೆ ಓದುವ ಗಿಳಿಯೇ, ನೀನೆಂದಿಗೂ ಅಳಿಯೆನೆಂದು ಗುಡುಗುಟ್ಟಿದೆಯಲ್ಲಾ! ನಿನ್ನ ಮನದಲ್ಲಿ ಮಾಯಾ ಮಂಜರವ ಕೊಲುವರೆ| ನಿನ್ನ ಪಂಜರವು ಕಾವುದೇ ಪೇಳಾ ಕೂಡಲಸಂಗಮದೇವನಲ್ಲದೆ?** **ಭಕ್ತಸ್ಥಳ** ೧೬೩

**ವಿವರಣೆ**—ಅಸ್ಥಿರವಾದ ಈ ದೇಹಕ್ಕೆ ಮೇಲಣ ವಚನದಲ್ಲಿ ನೀರಿನ ಗುಳ್ಳೆಯ ಉಪಮೆಯನ್ನು ಕೊಟ್ಟಿದ್ದಾರಷ್ಟೆ. ಆದರೆ ಈ ವಚನದಲ್ಲಿ ಇದಕ್ಕೆ ಗಿಳಿಯ ಪಂಜರದ ಉಪಮೆಯನ್ನು ಕೊಟ್ಟು ಇದು ಕ್ಷಣಿಕವಾದುದರಿಂದ ದೇಹ ಭೋಗದಲ್ಲಿಯೇ ಮಗ್ನರಾಗಿ ಪರಮಾತ್ಮನನ್ನು ಮರೆಯುವದು ಯುಕ್ತವಲ್ಲವೆಂದು ವಿವರಿಸಿದ್ದಾರೆ.

"ಪಂಚಭೂತಗಳಿಂದ ಕೂಡಿದ ಈ ದೇಹವೆಂಬ ಪಂಜರದಲ್ಲಿರುವ ಜೀವನೆಂಬ ಗಿಳಿಯೇ, ಈ ದೇಹವೆಂಬ ಪಂಜರವು ಬಹು ಭದ್ರವಾಗಿದೆಯೆಂದು ತಿಳಿದು ನೀನು ಎಂದೆಂದೂ ಮರಣ ಹೊಂದುವುದಿಲ್ಲವೆಂದು ಭಾವಿಸಿ ಯಾವ ಪಾಪ ಕಾರ್ಯಗಳಿಗೂ ಅಂಜದೆ ನಾನಾ ಶಾಸ್ತ್ರ ನೀತಿಗಳನ್ನು ಹೇಳುತ್ತ ವಿಷಯೋಪಭೋಗದಿಂದುಂಟಾಗುವ ಸಂತೋಷವನ್ನೇ ಗುಡಿತೋರಣವಾಗಿ ಮಾಡಿಕೊಂಡು ಮೆರೆಯುವಿಯಲ್ಲಾ! ಅಯ್ಯೋ! ನಿನ್ನ ಮನಸ್ಸಿನಲ್ಲಿಯೇ ಇರುವ ಮಾಯೆಯೆಂಬ ಬೆಕ್ಕು ನಿನ್ನನ್ನು ಹಿಡಿದು ಕೊಲ್ಲುತ್ತಿರುವಾಗ ಲಿಂಗದೇವನಲ್ಲದೆ ನಿನ್ನ ದೇಹವೆಂಬ ಪಂಜರವೇನಾದರೂ ಬಂದು ಬಿಡಿಸಿಕೊಂಡು ಕಾಪಾಡುವುದೇ? ಹೇಳು ನೋಡೋಣ?"

(೨೫) **ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ ಬಿಲೆಗೈವರಯ್ಯಾ| ನೆಲನಾಳ್ವನ ಹೆಣನೆಂದರೆ ಒಂದಡಿಕೆಗೆ ಕೊಂಬುವರಿಲ್ಲ ನೋಡಯ್ಯಾ | ಮೊಲನಿಗಿಂದ ಕರಕಷ್ಟ ನರರ ಬಾಳುವೆ ಸಲೆ ನಂಬೋ ನಮ್ಮ ಕೂಡಲ ಸಂಗಮದೇವನ||** ಭಕ್ತ ಸ್ಥಳ ೧೫೮.

**ವಿವರಣೆ**—ಈ ಮನುಷ್ಯ ದೇಹವು ಕ್ಷಣಭಂಗುರವಾದುದಷ್ಟೇ ಅಲ್ಲ, ಇದು ಅಂತ್ಯದಲ್ಲಿ ಬಹು ನಿಷ್ಪ್ರಯೋಜನವಾದುದಾಗಿಯೂ ಇದೆ. ಆದಕಾರಣ ಈ ದೇಹವನ್ನು ಮೆಚ್ಚಿ ಇದರ ಪೋಷಣೆಯಲ್ಲಿಯೇ ಮಗ್ನರಾಗದೆ ಪರಮಾತ್ಮನಲ್ಲಿ ದೃಢ ಭಕ್ತಿಯನ್ನಿಟ್ಟು ಆತ್ಮೋನ್ನತಿಯನ್ನು ಮಾಡಿಕೊಳ್ಳಬೇಕೆಂದು ಈ ವಚನದಲ್ಲಿ ವಿವರಿಸಿದ್ದಾರೆ.

"ಬೇಡರವನು ಅಡವಿಯಲ್ಲಿ ಒಂದು ಮೊಲವನ್ನು ಹೊಡೆದುಕೊಂಡು ಅದನ್ನು ಮಾರಲಿಕ್ಕೆ ತೆಗೆದುಕೊಂಡು ಬಂದರೆ ಮಾಂಸಾಹಾರಿಗಳು ಒಂದಾಣೆ ರೊಕ್ಕವನ್ನಾದರೂ ಕೊಟ್ಟು ಕೊಂಡುಕೊಳ್ಳುತ್ತಾರೆ. ಆದರೆ ಭೂಮಿಗೊಡೆಯನಾದ ರಾಜನು ಸತ್ತರೆ ಆತನ ಹೆಣವನ್ನು ಒಂದಡಿಕೆಗಾದರೂ ಯಾರೂ ತೆಗೆದುಕೊಳ್ಳುವುದಿಲ್ಲ. ಆದಕಾರಣ ಲಿಂಗದೇವನಲ್ಲಿ ನಿಷ್ಠೆಯನ್ನಿಟ್ಟು ಪೂಜಿಸದಿದ್ದವನ ದೇಹವು ಮೊಲದ ದೇಹಕ್ಕಿಂತಲೂ ಕೀಳಾದುದಾಗಿದೆ ಆದುದರಿಂದ ಲಿಂಗದೇವನಲ್ಲಿ ಭಕ್ತಿಯನ್ನಿಟ್ಟು ದೇಹ ಸಾರ್ಥಕ್ಯವನ್ನು ಮಾಡಿಕೋ"

**(೨೬) ಕುಂಬಳದಕಾಯಿಗೆ ಕಬ್ಬಿನದ ಕಟ್ಟು ಕೊಟ್ಟರೆ ಕೊಳೆವುದಲ್ಲದೆ ಬಲವಾಗಬಲ್ಲುದೇ? ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ ಭಕ್ತಿಯಂತಹುದು ಮುನ್ನಿನಂತಲ್ಲದೇ? ಕೂಡಲ ಸಂಗಯ್ಯ ಮನಹೀನನ ಮೀಸಲಗಾಯಿಗಿರಿಸಿದಂತೆ.||** **ಭಕ್ತ ಸ್ಥಳ ೯೬.**

ವಿವರಣೆ—ಲಿಂಗದೇವನನ್ನು ಪೂಜಿಸಿ ಜನ್ಮಸಾರ್ಥಕ್ಯವನ್ನು ಮಾಡಿಕೊಳ್ಳಬೇಕೆಂದಪೇಕ್ಷಿಸುವವನು ಆ ಶಿವನನ್ನು ಪೂಜಿಸುವ ವಿಧಾನ ಸಾಮರ್ಥ್ಯಗಳನ್ನು ಹೊಂದಲು ಶಿವದೀಕ್ಷೆಯನ್ನು ಪಡೆಯಬೇಕಾಗುವುದಷ್ಟೆ. ಅಂಥ ಶಿವದೀಕ್ಷೆಯು ಎಂಥವರಿಗೆ ಸಲ್ಲುವದೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ಕುಂಬಳಕಾಯಿಯು ಬಹುದಿನ ಬಾಳಬೇಕೆಂದು ಭದ್ರವಾದ ಕಬ್ಬಿಣದ ಕಟ್ಟನ್ನು ಅದಕ್ಕೆ ಹಾಕಿದರೆ ಆ ಕುಂಬಳಕಾಯಿಯು ಕೊಳೆತುಹೋಗುವುದಲ್ಲದೆ ಹೇಗೆ ಬಲಿತು ಬಹುಕಾಲವಿರುವದಿಲ್ಲವೋ ಹಾಗೆಯೇ ದುರ್ವಿಷಯಗಳಲ್ಲಿಯೇ ಯಾವಾತನ ಮನಸ್ಸು ಆಸಕ್ತವಾಗಿರುತ್ತದೆಯೋ ಆತನಿಗೆ ಇಷ್ಟಲಿಂಗವನ್ನು ಧರಿಸಿದರೆ (ಶಿವದೀಕ್ಷೆ) ಆತನು ಮೊದಲಿನಂತೆಯೇ ದುರ್ವಿಷಯಗಳಲ್ಲಿಯೇ ಪ್ರವರ್ತಿಸುವನೇ ವಿನಾ ಆ ಲಿಂಗದೇವನ ವಿಷಯದಲ್ಲಿ ಭಕ್ತಿಯುಳ್ಳವನಾಗಲಾರನು. ನಾಲಿಗೆಯ ರುಚಿಗೊಳಗಾದ ಹೀನ ಮನಸ್ಸಿನವನನ್ನು ಗುರು ದೇವತೆಗಳಿಗೆ ಮೀಸಲಾಗಿ ತೆಗೆದಿಟ್ಟ ಭೋಜ್ಯ ಪದಾರ್ಥಗಳ ರಕ್ಷಣೆಗೆ ನಿಯಮಿಸಿದರೆ ಆ ಮೀಸಲ

ಪದಾರ್ಥಗಳನ್ನು ತಿನ್ನಬಾರದೆಂಬ ಅರಿವಿಲ್ಲದೆ ಹೇಗೆ ರುಚಿನೋಡುತ್ತಾ ಪೂರ್ತಿಯಾಗಿ ತಿಂದು ಬಿಡುತ್ತಾನೆಯೋ, ಹಾಗೆಯೇ ದುರ್ವಿಷಯಗಳಲ್ಲಿ ಮನಸ್ಸುಳ್ಳವನು ತನಗೆ ಶಿವದೀಕ್ಷೆಯಿಂದ ಪ್ರಾಪ್ತವಾದ ಇಷ್ಟಲಿಂಗವನ್ನು ಪೂಜಿಸುವ ವಿಷಯದಲ್ಲಿ ಗುರುದೇವನು ಅಪ್ಪಣೆ ಮಾಡಿರುವ ನಿಯಮವನ್ನು ಮರೆತು ವಿಷಯೋಪಭೋಗಗಳಲ್ಲಿಯೇ ಆಸಕ್ತನಾಗುವನೇ ವಿನಾ ಭಕ್ತಿಪರನಾಗಲಾರನು.

**(೨೭) ಸಗಣಿಯ ಬೆನಕಂಗೆ ಸಂಪಿಗೆಯ ಅರಳಲ್ಲಿ ಪೂಜಿಸಿದರೆ ರಂಜನೆಯಲ್ಲದೆ ಅದರ ಗಂಜಳ ಬಿಡದಣ್ಣಾ! ಮಣ್ಣ ಪುತ್ಥಳಿಯ ಮಾಣಿಕ ಜಲದಲ್ಲಿ ತೊಳೆದರೆ ನಿಚ್ಚ ನಿಚ್ಚಕೆ ಕೆಸರಹುದಲ್ಲದೆ ಅದರಚ್ಚುಗ ಬಿಡದಣ್ಣಾ! ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ ಕೆಟ್ಟವನೇಕೆ ಸದ್ಭಕ್ತನಹನು ಕೂಡಲ ಸಂಗಮದೇವ?** ಭಕ್ತ ಸ್ಥಳ ೯೩

**ವಿವರಣೆ**—ಪ್ರಾಪಂಚಿಕ ವಿಷಯಗಳಲ್ಲಿ ಮಗ್ನರಾಗಿರುವ ಮನುಷ್ಯರಿಗೆ (ಲೋಕದ ಮಾನವರಿಗೆ) ಶಿವದೀಕ್ಷೆಯನ್ನು ಕೊಟ್ಟರೆ ಅವರು ಶಿವಭಕ್ತರಾಗುವದಿಲ್ಲವೆಂಬುದನ್ನು ಎರಡು ದೃಷ್ಟಾಂತಗಳಿಂದ ಈ ವಚನದಲ್ಲಿ ವಿವರಿಸಿದ್ದಾರೆ.

"ಸಗಣಿಯಿಂದ ಒಂದು ಗಣಪತಿಯ ಮೂರ್ತಿಯನ್ನು ಮಾಡಿ ಅದನ್ನು ಸಂಪಿಗೆಯ ಹೂಗಳಿಂದ ಪೂಜಿಸಿದರೆ ನೋಡುವದಕ್ಕೆ ಚಂದವಾಗಿ ತೋರಬಹುದೇ ವಿನಾ ಅದರ ಹತ್ತಿರ ಹೋದರೆ ಸಗಣಿಯ ದುರ್ವಾಸನೆ ಬರುವದು ಹೇಗೆ ಬಿಡುವದಿಲ್ಲವೋ ಮತ್ತು ಹಸಿಯ ಮಣ್ಣಿನಿಂದ ಒಂದು ಗೊಂಬೆಯನ್ನು ಮಾಡಿ ಅದನ್ನು ಸ್ವಚ್ಛವಾಗಿಡಬೇಕೆಂದು ಪ್ರತಿನಿತ್ಯ ತೊಳೆದರೂ ಅದನ್ನು ತೊಳೆದ ತೊಳೆದ ಹಾಗೆ ಕೆಸರೇ ಹೇಗೆ ಹೆಚ್ಚಾಗುವದೋ ಹಾಗೆಯೇ ಪ್ರಾಪಂಚಿಕ ವಿಷಯಗಳಲ್ಲಿಯೇ ಮನಸ್ಸುಳ್ಳವರಿಗೆ ಶಿವದೀಕ್ಷೆಯನ್ನು ಕೊಟ್ಟರೆ ಅವರು ನೋಡುವದಕ್ಕೆ ಮಾತ್ರ ಲಿಂಗ, ಭಸ್ಮ, ರುದ್ರಾಕ್ಷಿಗಳಿಂದ ಚಂದಕಾಣಬಹುದೇ ವಿನಾ ಅವರಲ್ಲಿರುವ ದುರ್ವಿಷಯಗಳ ವಾಸನೆಯು ಮಾತ್ರ ಹೋಗಲಾರದು. ಜ್ಞಾನಾಗ್ನಿಯಿಂದ ಸುಡಲ್ಪಡದೆ ಹಸಿಯ ಮಣ್ಣಿನ ಬೊಂಬೆಗಳಂತಿರುವ ವಿಷಯಾಸಕ್ತ ಪ್ರಾಪಂಚಿಕರು ಎಷ್ಟೇ ಸ್ನಾನಾದಿಗಳನ್ನು ಮಾಡಿದರೂ ಹಸಿಯ ಮಣ್ಣಿನ ಬೊಂಬೆಯನ್ನು ತೊಳೆದು ಕೆಸರನ್ನು ಹೆಚ್ಚಿಸಿಕೊಂಡಂತೆಯೇ ವಿನಾ ನಿಜವಾದ ಶಿವಭಕ್ತರಾಗಲಾರರು. ಆದಕಾರಣ ದುರ್ವಿಷಯಗಳಿಂದ ಕೆಟ್ಟು ಹೋದವರಿಗೆ ಶಿವದೀಕ್ಷೆಯನ್ನು ಕೊಟ್ಟ ಮಾತ್ರದಲ್ಲಿ ಅವರು ಸದ್ಭಕ್ತರಾಗುವದಿಲ್ಲ."

**(೨೮) ಅಂಗದಿಚ್ಛೆಗೆ ಮದ್ಯಮಾಂಸವ ತಿಂಬರು| ಕಂಗಳಿಚ್ಛೆಗೆ ಪರವಧುವ ನೆರೆವರು| ಲಿಂಗಲಾಂಛನಧಾರಿಯಾದಲ್ಲಿ ಫಲವೇನು? ಲಿಂಗ ಪಥವ ತಪ್ಪಿ ನಡೆವರು| ಜಂಗಮ ಮುಖದಿಂದ ನಿಂದೆ ಬಂದರೆ| ಕೊಂಡ ಮಾರಿಂಗೆ ಹೋಹದು ತಪ್ಪದು ಕೂಡಲಸಂಗಮದೇವ|| ಭಕ್ತ ಸ್ಥಳ ೧೦೬.**

**ವಿವರಣೆ**—ಆಚರಣೆಯು ಪವಿತ್ರವಾದುದಾಗಿರದಿದ್ದರೆ ಎಂತಹ ಹೆಚ್ಚಿನ ಕುಲದಲ್ಲಿಯೇ ಹುಟ್ಟಿರಲಿ ಮತ್ತು ಎಂಥ ಮೇಲು ತರದ ದೀಕ್ಷಾ ಸಂಸ್ಕಾರಗಳನ್ನೇ ಮಾಡಿಕೊಂಡಿರಲಿ, ಆತನು ಪರಮಾತ್ಮನ ಕೃಪೆಗೆ ಪಾತ್ರನಾಗುವುದಿಲ್ಲವೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ದೇಹ ಸುಖಕ್ಕಾಗಿ ಮದ್ಯಮಾಂಸಗಳನ್ನು ಸೇವಿಸುತ್ತಾರೆ. ಮತ್ತು ಕಣ್ಣಿನ ಮೋಹದಿಂದ ಪರಸ್ತ್ರೀಯರನ್ನು ನೋಡುತ್ತಾರೆ ಇಂಥ ಪಾಪಾಚರಣೆಯವರು ಇಷ್ಟಲಿಂಗವನ್ನು ಧರಿಸಿಕೊಂಡ ಮಾತ್ರದಿಂದ ಅವರಿಗೆ ಮೋಕ್ಷವಾಗಲಾರದು. ಲಿಂಗವನ್ನು ಧರಿಸಿಕೊಂಡ ನಂತರ ಯಾವ ಪ್ರಕಾರ ಇಂದ್ರಿಯನಿಗ್ರಹಿಯಾಗಿರಬೇಕೆಂಬುವನ್ನು ತಿಳಿದುಕೊಂಡು ಅದರಂತೆ ನಡೆಯದಿದ್ದರೆ ಆತನು ಜಂಗಮ ಮೂರ್ತಿಗಳ ಮುಖದಿಂದಲೇ ಹುಟ್ಟಿ ಬಂದಿದ್ದರೂ ನರಕಿಯಾಗುವುದು ಮಾತ್ರ ತಪ್ಪುವುದಿಲ್ಲ."

**(೨೯) ಬಂಡಿತುಂಬ ಪತ್ರೆಯ ತಂದು ಕಂಡಕಂಡಲ್ಲಿ ಮಜ್ಜನಕ್ಕೆರೆವರಿ. ತಾಪತ್ರಯವ ಕಳೆದು ಲಿಂಗವ ಪೂಜಿಸಿ| ತಾಪತ್ರಯವ ಲಿಂಗವನೊಲ್ಲ| ಕೂಡಲ ಸಂಗಮದೇವ ಬರಿಯುದಕದಲ್ಲಿ ನೆನೆವನೆ?**
**ಭಕ್ತಸ್ಥಳ ೧೮೪**

**ವಿವರಣೆ**—ಪ್ರಾಪಂಚಿಕ ವಿಷಯದಲ್ಲಿ ಉಪೇಕ್ಷೆಯುಂಟಾದ ನಂತರ ಶಿವದೀಕ್ಷೆಯನ್ನು ಹೊಂದಿದರೂ ಆತನು ಅನಂತರ ಲಿಂಗಪೂಜೆಯನ್ನು ಹೇಗೆ ಮಾಡಬೇಕೆಂಬುದು ಈ ವಚನದಲ್ಲಿ ವಿವರಿಸಲ್ಪಟ್ಟಿದೆ.

"ನಾವು ಶಿವಪೂಜಕರು ಪತ್ರೆಯಿಲ್ಲದೆ ನಮ್ಮ ಪೂಜೆ ನಡೆಯುವುದಿಲ್ಲವೆಂಬುದನ್ನು ತೋರಿಸುವುದಕ್ಕಾಗಿ ಬಂಡಿಗಟ್ಟಲೆ ಪತ್ರೆಯನ್ನು ತಂದು ಊಟಕ್ಕೆ ಅನುಕೂಲ ಕಂಡಕಂಡಲ್ಲೆಲ್ಲಾ ಲಿಂಗಾಭಿಷೇಕ ಮಾಡಿ ಲಿಂಗದ ಮೇಲೆ ಪತ್ರೆಯ ರಾಶಿಯನ್ನೊಟ್ಟಿದರೆ ಅದು ಲಿಂಗಪೂಜೆಯಲ್ಲ. ಸತ್ವ, ರಜ, ತಮಗಳೆಂಬ ತ್ರಿಗುಣಗಳ ನಿವಾರಣಾರ್ಥವಾಗಿ ತ್ರಿದಳಗಳಿರುವ ಒಂದೇ ಪತ್ರೆಯನ್ನಾದರೂ ಭಕ್ತಿಪುರಸ್ಸರವಾಗಿ ಲಿಂಗದೇವನ ಮೇಲೆ ಏರಿಸಿದರೆ ಸ್ಥೂಲ-ಸೂಕ್ಷ್ಮ-ಕಾರಣಗ

ಳೆಂಬ ತ್ರಿದೇಹಗಳಲ್ಲಿರುವ ಪಾಪವು ನಾಶವಾಗುವುದು. ಹಸಿವೆಯಾಗಿದೆಯೆಂದಾಗಲಿ, ಅಥವಾ ಬಾಯಾರಿಕೆಯಾಗಿದೆಯೆಂದಾಗಲಿ, ಇಲ್ಲವೆ ಶೀತೋಷ್ಣಗಳಲ್ಲಿ ಯಾವುದೊಂದರ ಬಾಧೆಯಾಗಿದೆಯೆಂದಾಗಲಿ, ಈ ತಾಪತ್ರಯಗಳಲ್ಲಿ ಯಾವುದಾದರು ಒಂದು ತಾಪವನ್ನಿಟ್ಟುಕೊಂಡು ಲಿಂಗವನ್ನು ಪೂಜಿಸಿದರೆ ಈ ಪೂಜೆಯು ವ್ಯರ್ಥವೇ ಸರಿ ಈ ಯಾವ ತಾಪಗಳೂ ಇಲ್ಲದೆ ಶಾಂತಚಿತ್ತದಿಂದ ಪೂಜಿಸಿದ ಪೂಜೆಯೇ ಆತನಿಗೆ ಮುಟ್ಟುತ್ತದೆ ಒಳಗೆ ಭಕ್ತಿ ಜಲವು ಉಕ್ಕೇರಿ ಹೊರಗೆ ಆನಂದಾಶ್ರುಗಳು ಬಂದಾಗ ಮಾಡುವ ಪೂಜೆಗೇನೇ ಲಿಂಗದೇವನು ಸಂತುಷ್ಟನಾಗುವನಲ್ಲದೆ ಇಂಥ ಭಕ್ತಿ ಸಂತೋಷಗಳಿಲ್ಲದೆ ಕೊಡಗಟ್ಟಲೆ ನೀರನ್ನು ಹಾಕಿದ ಮಾತ್ರದಲ್ಲಿ ಆತನು ಸಂತುಷ್ಟನಾಗಿ ಉಬ್ಬಲು ಲಿಂಗದೇವನೇನಾದರೂ ಹೆಸರು, ಕಡಲೆಗಳಂತೆ ಧಾನ್ಯವಾಗಿದ್ದಾನೆಯೋ?"

**(೩೦) ಹಸಿದು ಎಕ್ಕೆಯಕಾಯ ಮೆಲ್ಲಬಹುದೇ? ನೀರಡಿಸಿ ವಿಷವ ಕುಡಿಯಬಹುದೇ? ಸುಣ್ಣದ ತುಯ್ಯಲ ಬಣ್ಣವೊಂದೇ ಎಂದರೆ ನಂಟುತನಕ್ಕೆ ಉಣ್ಣಬಹುದೇ? ಲಿಂಗಸಾರಾಯ ಸಜ್ಜನರಲ್ಲದವರ ಕೂಡಲ ಸಂಗಮದೇವನಿಂನೆಂತೊಲಿವ?** ಭಕ್ತಸ್ಥಳ ೧೨೦.

ವಿವರಣೆ—ಲಿಂಗಪೂಜೆಯನ್ನು ಮಾಡುವುದರಲ್ಲಿ ಎಷ್ಟೇ ಬಲ್ಲಿದರಾಗಿರಲಿ, ಅವರ ಡಂಭದ ಲಿಂಗಪೂಜೆಯು ಭವರೋಗವನ್ನು ನಿವಾರಣೆ ಮಾಡುವುದಿಲ್ಲ. ಭವರೋಗ ನಿವಾರಣೆಗೆ ಸಹಜವಾದ ಶಿವಪೂಜೆಯು ಔಷಧದಂತೆಯೂ, ಸದ್ಗುಣಗಳು ಪಥ್ಯದಂತೆಯೂ ಇವೆ. ಆದಕಾರಣ ಪಥ್ಯವನ್ನಾಚರಿಸವ ರೋಗಿಯು ಔಷಧಿಯನ್ನು ಎಷ್ಟು ಸೇವಿಸಿದರೂ ಹೇಗೆ ರೋಗದಿಂದ ಮುಕ್ತನಾಗುವದಿಲ್ಲವೋ ಹಾಗೆಯೇ ಸದ್ಗುಣಗಳಿಲ್ಲದವರು ಲಿಂಗಪೂಜೆಯನ್ನು ಎಷ್ಟು ಮಾಡಿದರೂ ಪರಮಾತ್ಮನ ಪ್ರೀತಿಗೆ ಪಾತ್ರರಾಗುವುದಿಲ್ಲವೆಂಬ ಅಂಶವನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ಹಸಿವೆಯಾಗಿದೆಯೆಂದು ತೆಂಗು ಮೊದಲಾದ ದೇಹಕ್ಕೆ ಹಿತಕರವಾದ ಕಾಯಿಗಳನ್ನು ತಿನ್ನಬೇಕಲ್ಲದೆ ಎಕ್ಕೆಯ ಕಾಯಿಗಳನ್ನು ತಿನ್ನಬಹುದೆ? ನೀರಿಲ್ಲದೆ ಪ್ರಾಣ ಹೋಗುತ್ತಲಿದೆಯೆಂದು ನೀರಡಿಸಿರುವವನು ಪ್ರಾಣ ರಕ್ಷಣೆಗೆ ನೀರನ್ನು ಕುಡಿಯಬೇಕಲ್ಲದೆ ವಿಷವನ್ನು ಕುಡಿಯಬಹುದೆ? ಹಾಲು ನೀಡುವುದಕ್ಕೆ ಪ್ರತಿಯಾಗಿ ಸುಣ್ಣದ ನೀರನ್ನು ನೀಡಲಿಕ್ಕೆ ಬಂದರೆಂದು ಅದು ಹಾಲಿನಂತೆಯೇ ಬೆಳ್ಳಗಿದೆಯೆಂತಲೂ ಅದನ್ನು ನಮ್ಮ ಬಂಧು-ಬಳಗದವರೇ ನೀಡುತ್ತಿದ್ದಾರೆಂತಲೂ,

ಸುಣ್ಣದ ತಿಳಿಯನ್ನುಣ್ಣಬಹುದೇ? ಹಸಿವು, ತೃಷೆ, ರುಚಿಗಳಿಗಾಗಿ ಎಕ್ಕೆಯಕಾಯಿ, ವಿಷ, ಸುಣ್ಣದ ನೀರುಗಳನ್ನು ಸುಜ್ಞರು ಹೇಗೆ ಸೇವಿಸುವುದಿಲ್ಲವೋ ಹಾಗೆಯೇ ಸತ್ಯ, ಶಮೆ, ದಮೆ, ದಯಾದಿ ಸದ್ಗುಣಗಳಿಂದ ಸಜ್ಜನರಾಗಿ ಶೋಭಿಸದಿದ್ದವರು ಲಿಂಗಪೂಜೆಯನ್ನು ಎಷ್ಟು ರಮ್ಯವಾಗಿ ಮಾಡಿದರೂ ಅವರಿಗೆ ಲಿಂಗದೇವನು ಹೇಗೆತಾನೆ ಒಲಿವನು?"

**(೩೦) ಕಲ್ಲನಾಗರ ಕಂಡರೆ ಹಾಲನೆರೆಯೆಂಬರು| ದಿಟನಾಗರ ಕಂಡರೆ ಕೊಲ್ಲೆಂಬರಯ್ಯ| ಉಂಬುವ ಜಂಗಮವು ಬಂದರೆ ನಡೆಯೆಂಬರು| ಉಣ್ಣದ ಲಿಂಗಕ್ಕೆ ಬೋನವ ನೀಡಿಯೆಂಬುವರಯ್ಯ| ನಮ್ಮ ಕೂಡಲ ಸಂಗನ ಶರಣರ ಕಂಡು ಉದಾಸೀನ ಮಾಡಿದರೆ ಕಲ್ಲುತಾಗಿದ ಮಿಟ್ಟೆಯಂತಿಪ್ಪರಯ್ಯ||** ಭಕ್ತಸ್ಥಳ ೧೯೪.

**ನಿವರಣೆ**—ಹಸಿದು ಬಂದವರಿಗೆ ಒಂದಗುಳನ್ನಾದರೂ ನೀಡದ ನಿರ್ದಯ ಮನುಷ್ಯನು ಲಿಂಗಪೂಜೆಯನ್ನು ಎಷ್ಟು ಮಾಡಿದರೂ ಪರಮಾತ್ಮನು ಆತನಿಗೆ ಮೆಚ್ಚುವುದಿಲ್ಲ. ಲಿಂಗಕ್ಕೆ ಜಂಗಮವೇ ಮುಖವು. ಸ್ಥಾವರವು ಜಂಗಮದಿಂದಲೇ ಎಂದರೆ ಚೈತನ್ಯದಿಂದಲೇ ಶ್ರೇಷ್ಠತ್ವವನ್ನು ಹೊಂದಿದೆ. ಪ್ರಾಣಕ್ಕೆ ಅನ್ನಾಹಾರಗಳನ್ನಿತ್ತಾಗಲೇ ದೇಹವು ಪುಷ್ಟವಾಗುತ್ತದೆ. ಲಿಂಗಕ್ಕೆ ಜಂಗಮವೇ ಪ್ರಾಣವಾಗಿರುವುದರಿಂದ ಜಂಗಮತೃಪ್ತಿಯೇ ಲಿಂಗತೃಪ್ತಿಯು. ವೀರಶೈವರು ಅಪ್ರಾಕೃತರು; ಎಂದರೆ, ಪ್ರಾಕೃತರಂತೆ ಪ್ರಕೃತಿಗಳಾದ ಅಗ್ನಿ ಜಲಾದಿಗಳನ್ನು ಯಜ್ಞಯಾಗಾದಿಗಳ ಮೂಲಕ ತೃಪ್ತಿಪಡಿಸುವವರಲ್ಲ. ಪುರುಷ ಎಂದರೆ ಚೇತನ ಪ್ರಾಣಿಗಳನ್ನು ತೃಪ್ತಿಪಡಿಸತಕ್ಕವರಾಗಿದ್ದಾರೆ. ಶ್ರೀ ಸ್ವಾಮಿ ರಾಮತೀರ್ಥರವರು ಕೂಡಾ ಯಜ್ಞರಹಸ್ಯವೆಂಬ ತಮ್ಮ ಲೇಖನದಲ್ಲಿ ಈ ತತ್ವವನ್ನೇ ಈ ಪ್ರಕಾರ ಹೇಳಿದ್ದಾರೆ—"ಕೃತ್ರಿಮ ಅಗ್ನಿ ನಾರಾಯಣನ ಮುಖದಲ್ಲಿ ತುಪ್ಪವನ್ನು ಸುರುವಿ ಅದನ್ನು ಅಪವ್ಯಯ ಮಾಡುವದಕ್ಕಿಂತ ಹಸಿವೆಯಿಂದ ಬಳಲುತ್ತಿರುವ ಸಾವಿರಾರು ಸಜೀವಿಗಳಾದ ನಾರಾಯಣರ ಜಠರಾಗ್ನಿಗೆ ರೊಟ್ಟಿಯ ತುಂಡನ್ನು ಸಮರ್ಪಿಸುವುದೇ ಈ ಕಾಲದಲ್ಲಿ ಅತ್ಯಂತ ಮಹತ್ವದ್ದಾಗಿದೆ"

"ಕಲ್ಲಿನ ನಾಗಪ್ಪನಿಗೆ ನಾಗರ ಪಂಚಮಿಯ ದಿವಸ ಹಾಲನ್ನೆರೆಯುವವರು ನಿಜವಾದ ಹಾವೇ ಬಂದರೆ ಆಗ ಅದಕ್ಕೆ ಹಾಲನ್ನು ಹಾಕದೆ ಅದನ್ನು ಕೊಲ್ಲಲು ಕಲ್ಲು ಕಟ್ಟಿಗೆಗಳನ್ನು ತೆಗೆದುಕೊಳ್ಳಿರೆಂದು ಹೇಗೆ ಹೇಳುತ್ತಾರೆಯೋ ಹಾಗೆಯೇ ಊಟ ಮಾಡದ ಲಿಂಗಮೂರ್ತಿಗೆ ಬೇಕಾದಷ್ಟು ನಾನಾ ನೈವೇದ್ಯವನ್ನು ಹಿಡಿಯು

ತ್ತಾರೆಯೇ ವಿನಾ ಆ ಲಿಂಗವೇ ಚರರೂಪದಲ್ಲಿ ಜಂಗಮವಾಗಿ ಬಂದು- 'ಹಸಿದಿರುವೆನು, ಊಟಕ್ಕೆ ಅನುಕೂಲವುಂಟೆ?' ಎಂದು ಕೇಳಿದರೆ ನಮ್ಮ ಮನೆಯಲ್ಲಿ ಮಾಡುವವರಿಲ್ಲವೆಂದು ಅವರನ್ನು ಕಳುಹಿಸಿ ಬಿಡುತ್ತಾರೆ. ಶಿವಶರಣರನ್ನು ಕಂಡು ಈ ಪ್ರಕಾರ ಉದಾಸೀನ ಮಾಡುವವರು ಕಲ್ಲಿಗೆ ತಾಗಿದ ಗುರಿಯು ಗುಂಡು ಹೇಗೆ ಪುಡಿಪುಡಿಯಾಗುತ್ತದೆಯೋ ಹಾಗೆಯೇ ನಾನಾ ದುಃಖಗಳಿಂದ ನಾಶವಾಗಿ ಹೋಗುತ್ತಾರೆ."

**(೩೨) ಅರ್ಥರೇಖೆಯಿದ್ದಲ್ಲಿ ಫಲವೇನು ಆಯುಷ್ಯರೇಖೆಯಿಲ್ಲದನ್ನಕ್ಕ? ಹೆಂದೆಯ ಕೈಯಲ್ಲಿ ಚಂದ್ರಾಯುಧವಿದ್ದು ಫಲವೇನು? ಅಂಧಕನ ಕೈಯಲ್ಲಿ ದರ್ಪಣವಿದ್ದು ಫಲವೇನು? ನಮ್ಮ ಕೂಡಲ ಸಂಗನ ಶರಣರನರಿಯದವರ ಕೈಯಲ್ಲಿ ಲಿಂಗವಿದ್ದು ಫಲವೇನು?** ಭಕ್ತಸ್ಥಳ ೧೦೮.

**ವಿವರಣೆ**— ಶಿವಶರಣರ ಸ್ಥಿತಿಯನ್ನರಿತು ಅವರನ್ನು ತೃಪ್ತಿಪಡಿಸದೆ ತಾನು ಶಿವಪೂಜಾಧುರೀಣನಾಗಬೇಕೆಂದಪೇಕ್ಷಿಸುವುದು ಎಷ್ಟು ಅನುಚಿತವಾದುದೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ಯಾವಾತನು ಆಯುಷ್ಯರೇಖೆಯಿಲ್ಲದೆ ಅಲ್ಪಾಯುವಾಗಿದ್ದಾನೆಯೋ ಆತನು ಎಷ್ಟೇ ಹೆಚ್ಚಾದ ಧನರೇಖೆಯುಳ್ಳವನಾಗಿದ್ದರೂ ಹೇಗೆ ಆ ದ್ರವ್ಯವು ಆತನ ಉಪಭೋಗಕ್ಕೆ ಬರುವುದಿಲ್ಲವೋ, ಹೇಡಿಯ ಕೈಯಲ್ಲಿ ಬಹು ತೀಕ್ಷ್ಣವಾದ ಚಂದ್ರಾಯುಧವಿದ್ದರೂ ಅದರಿಂದ ಹೇಗೆ ವೈರಿಗಳು ನಾಶವಾಗುವದಿಲ್ಲವೋ, ಕುರುಡನ ಕೈಯಲ್ಲಿ ಬಹು ಮಿನುಗುವ ಕನ್ನಡಿಯಿದ್ದರೂ ಅದರಿಂದ ಅವನ ಮುಖವು ಹೇಗೆ ಆತನಿಗೆ ಕಾಣುವುದಿಲ್ಲವೋ ಮತ್ತು ಮಂಗನ ಕೈಯಲ್ಲಿ ಮಾಣಿಕ್ಯವನ್ನು ಕೊಟ್ಟರೂ ಅದನ್ನು ಮಂಗವು ಮೂಸಿ ನೋಡಿ ವಾಸನೆಯಿಲ್ಲವೆಂತಲೂ, ಕಡಿದು ನೋಡಿ ರುಚಿಯಿಲ್ಲವೆಂತಲೂ ಅದನ್ನು ಒಗೆದು ಬಿಡುವವರಿಂದ ಆದಕ್ಕೆ ಮಾಣಿಕ್ಯವು ಹೇಗೆ ವ್ಯರ್ಥವಾದುದಾಗಿ ಪರಿಣಮಿಸುತ್ತದೆಯೋ ಹಾಗೆಯೇ, ಶಿವಶರಣ ಮಹಿಮೆಯನ್ನರಿತುಕೊಂಡು ಅವರ ತೃಪ್ತಿಯಲ್ಲ ನಿರತರಾಗದಂಥವರು ಅಂಗೈಯಲ್ಲಿ ಲಿಂಗವನ್ನಿಟ್ಟುಕೊಂಡು ಎಷ್ಟು ಪೂಜಿಸಿದರೂ ಅದು ವ್ಯರ್ಥವೇ ಸರಿ."

**(೩೩) ನಡೆಯಲರಿಯದೆ ನುಡಿಯಲರಿಯದೆ ಲಿಂಗವ ಪೂಜಿಸಿ ಫಲವೇನು? ಅವರ ಸುಖವೆನ್ನ ಸುಖ| ಅವರ ದುಃಖವೆನ್ನ ದುಃಖ| ಕೂಡಲ ಸಂಗನ ಶರಣರ ಮನನೊಂದರೆ ಬೆಂದೆನಯ್ಯ||** ಭಕ್ತಸ್ಥಳ ೪೮೭.

**ವಿವರಣೆ**—ಶಿವನಿಗೆ ಶರಣಾಗತರಾದ ಭಗವದ್ಭಕ್ತರ ಜೀವಿತವು ಜನಾಂಗಕ್ಕೆ ಸನ್ಮಾರ್ಗವನ್ನು ತೋರಿಸುವದಕ್ಕಾಗಿಯೇ ಇರುತ್ತದೆ. ಆದಕಾರಣ ಅಂಥ ಮಾರ್ಗದರ್ಶಕರಿಗೆ ಹಿಂಸೆಯನ್ನುಂಟುಮಾಡಿದರೆ ಜನಾಂಗವು ಸನ್ಮಾರ್ಗದರ್ಶಕರಿಲ್ಲದೆ ನಾನಾ ದುಃಖಗಳಿಂದ ಬೆಂದು ಬೆಂಡಾಗಿ ಹೋಗಬೇಕಾಗುವ ಪ್ರಯುಕ್ತ ಅಂಥ ಮಹಾತ್ಮರ ಸಂಗಡ ಹೇಗೆ ವರ್ತಿಸಬೇಕೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ಸತ್ಯ ಅಹಿಂಸಾದಿ ಸಾಮಾನ್ಯ ಧರ್ಮಗಳನ್ನು ಮತ್ತು ಅಷ್ಟಾವರಣ ಪಂಚಾಚಾರಾದಿ ವೀರಶೈವ ಮತದ ವಿಶೇಷ ಧರ್ಮಗಳನ್ನು ಚೆನ್ನಾಗಿ ತಿಳಿದುಕೊಂಡು ಅವುಗಳಂತೆ ನಡೆಯದೆ ಮತ್ತು ಸದಾ ಷಣಗಳನ್ನು ನುಡಿಯದೆ ಲಿಂಗವನ್ನು ಪೂಜಿಸುವುದರಿಂದ ಮೋಕ್ಷವು ಹೇಗೆ ತಾನೆ ದೊರೆಯುವುದು? ಶಿವಶರಣರ ಸುಖವೇ ತನ್ನ ಸುಖವೆಂತಲೂ ಅವರ ದುಃಖವೇ ತನ್ನ ದುಃಖವೆಂತಲೂ ತಿಳಿದು ಅವರಿಗೆ ಸುಖವಾಗುವಂತೆ ತಾನು ವರ್ತಿಸಿದಾಗಲೇ ಲಿಂಗಪೂಜೆಯು ಫಲವು ಪ್ರಾಪ್ತವಾಗುವುದು. ಶಿವಶರಣರ ಮನಸ್ಸಿಗೆ ನೋವಾದರೆ ನಾನು ದುಃಖದಿಂದ ಬೆಂದೇ ಹೋಗುವೆನು."

(೩೪) **ತನುವ ನೋಯಿಸಿ ಮನವ ಬಳಲಿಸಿ ನಿಮ್ಮ ಪಾದವ ಪಿಡಿವರೊಳರೆ? ಈ ನುಡಿ ಸುಡದಿಹುದೇ ಕೂಡಲಸಂಗಮದೇವ ಶಿವಭಕ್ತರ ನೋವೇ ಅದೇ ಲಿಂಗದ ನೋವು||** ಭಕ್ತ ಸ್ಥಳ ೪೦೮.

**ವಿವರಣೆ**—ಶಿವಭಕ್ತರಾದ ನಮ್ಮ ಸಮಾಜದವರು ದಾರಿದ್ರ್ಯ ಅಜ್ಞಾನಾದಿಗಳಲ್ಲಿ ಬಳಲುತ್ತಿರುವಾಗ ಅವರ ದುಃಖಗಳನ್ನು ನಾಶ ಮಾಡಲು ಪ್ರಯತ್ನಿಸದೆ ತಾವು ಶಿವಪೂಜಾ ಧುರೀಣರೆಂದು ಹೇಳಿಸಿಕೊಳ್ಳಲು ಶಿವಪೂಜೆಯಲ್ಲಿಯೇ ನಿರತರಾದರೆ ಅವರ ಪೂಜೆಯು ಲಿಂಗದೇವನಿಗೆ ಸಂತೋಷವನ್ನುಂಟುಮಾಡುವುದಿಲ್ಲ. ಏಕೆಂದರೆ, ಶಿವಭಕ್ತರಿಗಾಗುವ ನೋವನ್ನು ಲಿಂಗದೇವನೂ ಅನುಭವಿಸಬೇಕಾಗುತ್ತದೆ. ಆದಕಾರಣ ಸಮಾಜಕ್ಕುಂಟಾದ ದುಃಖವನ್ನು ನಿವಾರಣೆ ಮಾಡಲು ಪ್ರಯತ್ನಿಸುವುದು ಒಂದು ವಿಧವಾದ ಲಿಂಗಪೂಜೆಯೆಂದೇ ಈ ವಚನದಲ್ಲಿ ವಿವರಿಸಿದ್ದಾರೆ.

"ಶಿವಭಕ್ತರನ್ನು ಹೊಡೆದು ಬಡಿದು ವಂಚಿಸಿ ಅನೇಕ ರೀತಿಗಳಿಂದ ಹಿಂಸಿಸಿ ಅವರಿಗೆ ನಾನಾ ಬಿರುನುಡಿಗಳನ್ನಾಡಿ ಅವರ ಮನಸ್ಸನ್ನು ನೋಯಿಸಿದ

ವರು ಲಿಂಗಪೂಜೆಯನ್ನು ಎಷ್ಟೇ ಮಾಡಿದರೂ ಅವರು ಪರಮಾತ್ಮನ ಪಾದವನ್ನು ಕಾಣುವುದಿಲ್ಲ. ಶಿವಭಕ್ತರ ತನುಮನಗಳಿಗೆ ಎಷ್ಟೇ ದುಃಖಗಳನ್ನು ಉಂಟುಮಾಡಿದ್ದರೂ ಲಿಂಗಪೂಜೆಯಿಂದ ಆ ಪಾಪಗಳೆಲ್ಲಾ ಹೋಗಿ ಶಿವನ ಸನ್ನಿಧಿಯು ಪ್ರಾಪ್ತವಾಗುತ್ತದೆಂದು ಯಾರಾದರೂ ಹೇಳಿದರೆ ಅವರ ಆ ಮಾತು ವ್ಯರ್ಥವಾದುದೇ ಸರಿ. ಏಕೆಂದರೆ, ಶಿವಭಕ್ತರಿಗಾಗುವ ನೋವೇ ಲಿಂಗದೇವನಿಗೂ ಸಂಭವಿಸುತ್ತದೆ."

(೩೫) **ಜಂಗಮನಿಂದೆಯು ಮಾಡಿ ಲಿಂಗವ ಪೂಜಿಸುವ ಭಕ್ತನ ಅಂಗವಣೆಯೆಂತೋ ಶಿವಶಿವ! ನಿಂದಿಸುವ ಪೂಜಿಸುವ ಪಾತಕವ ಕೇಳಲಾಗದು| ಗುರುವಿನ ಗುರು ಜಂಗಮವಿಂತೆಂದುದು ಕೂಡಲ ಸಂಗನ ವಚನ||** ಭಕ್ತಸ್ಥಳ ೪೨೩.

**ವಿವರಣೆ**—ಇಲ್ಲದ ದೋಷಗಳನ್ನು ಕಲ್ಪಿಸಿ ಅನ್ಯರನ್ನು ನಿಂದಿಸುವುದೇ ಪಾಪಕೃತ್ಯವು. ಇಂಥ ನಿಂದೆಗಳನ್ನು ಗುರುಗಳ ವಿಷಯದಲ್ಲಿ ಮಾಡುವುದಂತೂ ಮಹಾ ಪಾಪಕೃತ್ಯವೇ ಸರಿ. ಶ್ರೀ ಸ್ವಾಮಿ ವಿವೇಕಾನಂದರು ಭಕ್ತಿಯೋಗದ ತಮ್ಮ ವ್ಯಾಖ್ಯಾನದಲ್ಲಿ ಹೇಳಿರುವಂತೆ ಗುರುಗಳಲ್ಲಿ ಸಿದ್ಧಗುರು ಮತ್ತು ಅವತಾರಿ ಗುರು ಎಂದು ಎರಡು ಪ್ರಕಾರದ ಗುರುಗಳಿದ್ದಾರಷ್ಟೆ. ಸಿದ್ಧಗುರುಗಳಿಗಿಂತಲೂ ಶ್ರೇಷ್ಠರಾದ ಅವತಾರಿ ಗುರುಗಳನ್ನು ಎಂದರೆ ಜಂಗಮರನ್ನು ನಿಂದಿಸುವುದಂತೂ ಘೋರ ಪಾಪಕೃತ್ಯವೆಂಬುದನ್ನು ಹೇಳಬೇಕಾದುದೇ ಇಲ್ಲ. ಆದಕಾರಣ ಗುರು ಜಂಗಮರುಗಳನ್ನು ನಿಂದಿಸುವವರು ಲಿಂಗಪೂಜೆಯನ್ನು ಎಷ್ಟು ಮಾಡಿದರೂ ಆ ಪೂಜೆಯು ವ್ಯರ್ಥವೇ ಸರಿಯೆಂದು ಈ ವಚನದಲ್ಲಿ ವಿವರಿಸಲ್ಪಟ್ಟಿದೆ.

"ಜಂಗಮರು ಅಂಥವರು ಇಂಥವರು ಎಂದು ಅವರನ್ನು ದೂಷಿಸುತ್ತ ಇಷ್ಟಲಿಂಗವನ್ನು ಪೂಜಿಸುತ್ತಿರುವ ಶಿವಭಕ್ತನ ಸಾಹಸವನ್ನೇನು ಹೇಳಲಿ, ಶಿವನೇ? ಈ ಪ್ರಕಾರ ಜಂಗಮರನ್ನು ದೂಷಿಸಿ ಶಿವಪೂಜೆಯನ್ನು ಮಾಡುತ್ತಿದ್ದಾರೆಂಬ ಪಾಪಾಚರಣೆಯ ಮಾತನ್ನು ಕೇಳಬಾರದು. ಏಕೆಂದರೆ ಜಂಗಮರು ಗುರುವಿಗೂ ಗುರುವಾಗಿದ್ದಾರೆಂದು ಶಿವೋಕ್ತಿಗಳು ಹೇಳುತ್ತಲಿವೆ."

(೩೬) **ಭಿತ್ತಿಯಿಲ್ಲದೆ ಬರೆಯಬಹುದೇ ಚಿತ್ತಾರವ? ಬಿತ್ತಿ ಬೆಳೆಯಬಹುದೆ ಧರೆಯಿಲ್ಲದೆ? ಜಂಗಮವಿಲ್ಲದೆ ಮಾಡಬಹುದೇ ಲಿಂಗಾರ್ಚನೆಯ? ರೂಢಿಗೀಶ್ವರನ ಭೇದಿಸಬಹುದೇ ಒಡಲಿಲ್ಲದ ನಿರಾಳಕರ್ತೃ ಕೂಡಲಸಂಗಮದೇವ, ಜಂಗಮ ಮುಖಲಿಂಗವಾದನಾಗಿ ಮತ್ತೊಂದನರಿಯೆನಯ್ಯ||** ಭಕ್ತಸ್ಥಳ ೩೯೭,

**ವಿವರಣೆ—** ಜಂಗಮವಿಲ್ಲದೆ ಲಿಂಗಪೂಜೆಯು ತೃಪ್ತಿಕರವಾಗಿ ಜರುಗುವುದಿಲ್ಲವಾದುದರಿಂದ ಲಿಂಗಪೂಜೆಯಲ್ಲಿ ಜಂಗಮ ತೃಪ್ತಿಯೇ ಮುಖ್ಯವಾದುದೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ಗೋಡೆಯಿಲ್ಲದೆ ಎಂದರೆ ಆಶ್ರಯಸ್ಥಾನವಿಲ್ಲದೆ ಚಿತ್ರವನ್ನು ಹೇಗೆ ಬರೆಯಲಿಕ್ಕೆ ಬರುವದಿಲ್ಲವೋ, ಮತ್ತು ಭೂಮಿಯಿಲ್ಲದೆ ಬೀಜವನ್ನು ಬಿತ್ತಿ ಬೆಳೆಯಲಿಕ್ಕೆ ಹೇಗೆ ಬರುವದಿಲ್ಲವೋ ಹಾಗೆಯೇ ಜಂಗಮ ಮೂರ್ತಿಯಿಲ್ಲದೆ ಲಿಂಗಾರ್ಚನೆಯನ್ನು ಮಾಡಲಿಕ್ಕೆ ಬರುವುದಿಲ್ಲ ಪ್ರಸಾದವನ್ನು ಸೇವಿಸಿ ತೃಪ್ತಿಯನ್ನು ಹೊಂದಲು ಒಡಲೇ ಇಲ್ಲದಿರುವ ನಿರಾಕಾರನಾದ ಆ ಲಿಂಗದೇವನನ್ನು ಈ ಲೋಕದಲ್ಲಿ ದೃಶ್ಯರೂಪಕ್ಕೆ ತಂದು, ತೃಪ್ತಿಪಡಿಸುವುದು ಸಾಧ್ಯವಲ್ಲ. ಆದಕಾರಣ ಜಂಗಮವು ಲಿಂಗದೇವನ ಮುಖವಾದುದರಿಂದ ಜಂಗಮ ತೃಪ್ತಿಯೇ ಲಿಂಗ ತೃಪ್ತಿಯೆಂದು ನಾನು ತಿಳಿದಿದ್ದೇನೆ."

(೩೭) **ನೂರನೋದಿ, ನೂರ ಕೇಳಿದರೇನು? ಆಶೆಹರಿಯದು, ರೋಷ ಬಿಡದು| ಮಜ್ಜನಕ್ಕೆರೆದು ಫಲವೇನು? ಮಾತಿನಂತೆ ಮನವಿಲ್ಲದ ಜಾತಿ ಡೊಂಬರ ನೋಡಿ ನಗುವ ನಮ್ಮ ಕೂಡಲಸಂಗಮದೇವ||**

**ಮಹೇಶ ಸ್ಥಳ ೧೨೬.**

**ವಿವರಣೆ—**ನಾನಾ ಶಾಸ್ತ್ರಗಳನ್ನು ಓದಿ ಕೇಳಿ ಪಂಡಿತನಾಗಿ, ಶಿವ ಪೂಜಾ ಧುರೀಣನಾದ ಮಾತ್ರದಿಂದ ಸದ್ಗುಣ ಶಾಲಿಯಾಗಿ ಪರಮಾತ್ಮನ ಪ್ರೀತಿಗೆ ಪಾತ್ರನಾಗುವದಿಲ್ಲ ತಾನು ಹೇಳುವಂತೆಯೇ ಮನಃಪೂರ್ವಕ ಆಚರಿಸಿದಾಗಲೇ ಪರಮಾತ್ಮನ ಒಲಿಮೆಯು ಪ್ರಾಪ್ತವಾಗುತ್ತದೆಂದು ಈ ವಚನದಲ್ಲಿ ವಿವರಿಸಿದ್ದಾರೆ.

"ಮನಸ್ಸಿನಲ್ಲೊಂದಿಟ್ಟುಕೊಂಡು ಮಾತಿನಲ್ಲಿ ಮತ್ತೊಂದನ್ನಾಡುತ್ತಿರುವವರು ವೇದವೇದಾಂತಾದಿ ಶಾಸ್ತ್ರಗಳನ್ನು ಓದಿ ಮಹಾ ಪಂಡಿತರಾಗಿದ್ದರೂ, ಪುರಾಣ ಪುಣ್ಯ ಕಥೆಗಳನ್ನು ಕೇಳಿ ಮಹಾ ಬುದ್ಧಿಶಾಲಿಗಳಾಗಿದ್ದರೂ, ಅವರಿಗೆ ಸಂಸಾರದಲ್ಲಿದ್ದ ಆಶೆಯು ನಿವಾರಣೆಯಾಗುವುದಿಲ್ಲ. ಮತ್ತು ಪ್ರಾಪಂಚಿಕ ಇಚ್ಛೆಯು ನೆರವೇರದಿದ್ದಾಗ ಅವರಲ್ಲಿ ಕೋಪವುಂಟಾಗದೆ ಇರುವುದಿಲ್ಲ ಆದಕಾರಣ ಡೊಂಬರಂತೆ ವಾಚಾರಭಸವುಳ್ಳ ಇಂಥ ಪಂಡಿತರು ಎಷ್ಟು ಕೊಡ ನೀರಿನಿಂದ ಲಿಂಗಾಭಿಷೇಕವನ್ನು ಮಾಡಿದರೂ ಪರಮಾತ್ಮನು ಇವರಿಗೆ ಮೆಚ್ಚುವುದಿಲ್ಲ.

(೩೮) **ಸದಾಚಾರ ಸದ್ಭಕ್ತಿಯಿಲ್ಲದವರ ನೊಲ್ಲನಯ್ಯ| ಅವರಾ**

**ರಾಧನೆ ದಂಡ| ನಿಚ್ಚ ನಿಚ್ಚ ಪ್ರಾಯಶ್ಚಿತ್ತರನೊಲ್ಲ ಕೂಡಲ ಸಂಗಮದೇವ ಭೂಮಿ ಭಾರಕರ||** ಮಹೇಶ ಸ್ಥಳ. ೧೨೫.

**ವಿವರಣೆ**—ಶಿವಪೂಜಕರಲ್ಲಿ ಒಳ್ಳೆಯ ನಡತೆ ಮತ್ತು ದೃಢ ಭಕ್ತಿಗಳಿರಬೇಕಾದುದು ಆವಶ್ಯಕ. ಮತ್ತು ಆಗಾಗ್ಗೆ ಆಚಾರ ಭ್ರಷ್ಟರಾಗಿ ಪ್ರಾಯಶ್ಚಿತ್ತವನ್ನು ಹೊಂದುತ್ತಲಿರುವಂಥ ಹೀನ ಪ್ರವೃತ್ತಿಯು ಅವರಲ್ಲಿರಬಾರದು. ಈ ಸಂಗತಿಗಳು ಈ ವಚನದಲ್ಲಿ ವಿವರಿಸಲ್ಪಟ್ಟಿವೆ.

"ಯಾರಲ್ಲಿ ಒಳ್ಳೆಯ ನಡತೆ ಮತ್ತು ಒಳ್ಳೆಯ ಭಕ್ತಿಯು ಇರುವುದಿಲ್ಲವೋ, ಅವರು ಶಿವಪೂಜೆಯನ್ನು ಎಷ್ಟು ಮಾಡಿದರೂ ವ್ಯರ್ಥವೇ ಸರಿ. ಕ್ಷಣೇ ಕ್ಷಣೇ ಆಚಾರ ಭ್ರಷ್ಟವಾಗುತ್ತ ಆ ಅಪರಾಧ ನಿವಾರಣೆಗೆ ಪ್ರಾಯಶ್ಚಿತ್ತವನ್ನು ಆಗಾಗ್ಗೆ ಹೊಂದುತ್ತಿರುವವರಿಗೂ ಪರಮಾತ್ಮನು ಮೆಚ್ಚುವುದಿಲ್ಲ. ಅವರೆಲ್ಲರೂ ಭೂಮಿಗೆ ಭಾರವಾಗಿ ನಿರರ್ಥಕ ಜೀವಿಸತಕ್ಕ ಪ್ರಾಣಿಗಳಾಗಿದ್ದಾರೆ."

**(೩೯) ಆಸ್ಯಾಯನಕ್ಕೆ ಅನ್ನವ ನೀಡುವೆ| ಲಾಂಛನಕ್ಕೆ ಶರಣೆಂಬೆ| ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ ಕೂಡಲ ಸಂಗಮದೇವ ನೀ ಸಾಕ್ಷಿಯಾಗಿ ಛೀ ಎಂಬೆನು||** ಮಹೇಶ ಸ್ಥಳ ೨೩೨.

**ವಿವರಣೆ**—ಎಂಥ ದುರಾಚಾರಗಳನ್ನು ಆಚರಿಸುತ್ತಿದ್ದರೂ ಅವರು ಶಿವಭಕ್ತರೆಂದು ಹೇಳಿಕೊಳ್ಳುವ ಮಾತ್ರದಿಂದ ಅವರ ನಡತೆಯು ಮಾನ್ಯವೆಂದೂ ಅವರು ಪೂಜ್ಯರೆಂದೂ ತಿಳಿಯುವುದು ವಿಹಿತವಲ್ಲವೆಂತಲೂ ಅವರಿಗೆ ಬುದ್ಧಿಯನ್ನು ಹೇಳಬೇಕೆಂತಲೂ ಈ ವಚನದಲ್ಲಿ ವಿವರಿಸಿದ್ದಾರೆ.

"ಹಸಿವೆಯಾಗಿದೆಯೆಂದು ಬಂದವರಿಗೆ ಅನ್ನವನ್ನು ನೀಡುವೆನು. ಮತ್ತು ಕಾವಿ, ಲಿಂಗ, ಭಸ್ಮ, ರುದ್ರಾಕ್ಷಿ ಮೊದಲಾದ ಶಿವಚಿನ್ಹಗಳನ್ನು ನೋಡಿದ ಕೂಡಲೇ ಆ ಚಿನ್ಹೆಗಳುಳ್ಳ ಶಿವಭಕ್ತನಲ್ಲಿ ಶಿವಾಚಾರಕ್ಕೆ ಸರಿಯಾದ ಆಚಾರವಿಲ್ಲದಿದ್ದರೆ ಮತ್ತು ಲಿಂಗ, ವಿಭೂತಿ, ಕಾವಿಬಟ್ಟೆ ಮೊದಲಾದ ಜಂಗಮ ಚಿನ್ಹಗಳುಳ್ಳವರಲ್ಲಿ ಜಂಗಮಾಚಾರಗಳಿರದಿದ್ದರೆ ಲಿಂಗದೇವನೇ, ನೀನು ಸಾಕ್ಷಿಯಾಗಿಯೂ ಅವರಿಗೆ 'ಛೀ, ಈ ಪ್ರಕಾರ ನಡೆಯಬೇಡಿ'ರೆಂದು ಬುದ್ಧಿಯನ್ನು ಹೇಳುವೆನು."

**(೪೦) ತಂದೆ ಮಕ್ಕಳಿಗೆ ಬುದ್ಧಿಯ ಹೇಳುವಲ್ಲಿ ಅವಗುಣಕ್ಕೆ ಮುನಿವನಲ್ಲದೆ ಪ್ರಾಣಕ್ಕೆ ಮುನಿಯ| ಲಿಂಗವಂತನು ಲಿಂಗವಂತರಿಗೆ ಬುದ್ಧಿಯ ಹೇಳುವಲ್ಲಿ ಅವಗುಣಕ್ಕೆ ಮುನಿವನಲ್ಲದೆ ಲಾಂಛನಕ್ಕೆ**

**ಮುನಿಯ| ಲಿಂಗಭಕ್ತನು ಲಿಂಗಪಥವ ಹೇಳಿದರೆ ಮತ್ಸರಿಸುವವರ ಮೆಚ್ಚ ಕೂಡಲ ಸಂಗಮದೇವ||** ಮಹೇಶ ಸ್ಥಳ ೧೨೭.

**ವಿವರಣೆ—** ಲಿಂಗವಂತರಲ್ಲಿ ಯಾರು ದುರ್ಗುಣ ದುರಾಚಾರಗಳುಳ್ಳವರಾಗಿದ್ದರೂ ಅವರಿಗೆ ಲಿಂಗವಂತರು ಬುದ್ಧಿಯನ್ನು ಹೇಳಿ ಒಟ್ಟಿಗೆ ಲಿಂಗವಂತ ಸಮಾಜವು ಸದಾಚಾರ ಸದ್ಗುಣಗಳಿಂದ ಕೂಡಿರುವಂತೆ ಮಾಡಬೇಕೆಂತಲೂ, ಈ ಪ್ರಕಾರ ಸಮಾಜೋನ್ನತಿಯನ್ನು ಮಾಡುವವರು ಜನರಲ್ಲಿರುವ ಅವಗುಣ ಅನಾಚಾರಗಳನ್ನು ಮಾತ್ರ ನಿಷೇಧಿಸಬೇಕೇ ವಿನಾ ಲಿಂಗವಂತ ಮತ್ತತತ್ವಗಳನ್ನು ಅಲ್ಲಗಳೆಯಬಾರದೆಂತಲೂ ಈ ವಚನದಲ್ಲಿ ವಿವರಿಸಿದ್ದಾರೆ.

"ಮಕ್ಕಳು ದುರ್ಗುಣಿಗಳಾಗಿ ದುರಾಚಾರಗಳಲ್ಲಿದ್ದರೆ ತಂದೆಯು ಅವರು ಸದ್ಗುಣಿಗಳೂ ಸದಾಚಾರಿಗಳೂ ಆಗಲೆಂದು ಅವರ ದುರ್ಗುಣಗಳನ್ನು ಕಳೆಯಲು ಸಿಟ್ಟಾಗುತ್ತಾನೆಯೋ ವಿನಾ ಆ ಮಕ್ಕಳ ಪ್ರಾಣವನ್ನೇ ತೆಗೆಯಲು ಹೇಗೆ ಪ್ರಯತ್ನಿಸುವುದಿಲ್ಲವೋ, ಹಾಗೆಯೇ ಒಬ್ಬ ಲಿಂಗವಂತನು ಇನ್ನೊಬ್ಬ ಲಿಂಗವಂತನಿಗೆ ಬುದ್ಧಿಯನ್ನು ಹೇಳುವಾಗ ಆತನಲ್ಲಿದ್ದ ದುರಾಚಾರಗಳನ್ನು ನಿಷೇಧಿಸುತ್ತಾನೆಯೋ ವಿನಾ ಲಿಂಗ-ಭಸ್ಮಾದಿ ಶಿವಲಾಂಛನಗಳನ್ನು ಅಲ್ಲಗಳೆಯುವುದಿಲ್ಲ. ಆದಕಾರಣ ಶಿವಾಚಾರದಲ್ಲಿ ಭಕ್ತಿ ವಿಶ್ವಾಸಗಳುಳ್ಳವನು ಅನಾಚಾರದಲ್ಲಿರುವವರಿಗೆ ಲಿಂಗಾಚಾರಗಳನ್ನು ಹೇಳಿದರೆ ಆ ಉಪದೇಶಕನ ವಿಷಯವಾಗಿ ಯಾರು ಹೊಟ್ಟೆಕಿಚ್ಚುಪಡುತ್ತಾರೆಯೋ ಅವರಿಗೆ ಲಿಂಗದೇವನು ಒಲಿಯುವುದಿಲ್ಲ."

---

## ೩ನೆಯ ಅಧ್ಯಾಯ.



(೪೧) **ಸ್ವಾಮಿ ಭೃತ್ಯ ಸಂಬಂಧಕ್ಕೆ ಆವುದು ಪಥವೆಂದೊಡೆ ದಿಟವನುಡಿವುದು; ನುಡಿದಂತೆ ನಡೆವುದು| ನುಡಿದು ಹುಸಿದ ನಡೆದು ತಪ್ಪುವ ಪ್ರಪಂಚಿಯನೊಲ್ಲ ನಮ್ಮ ಕೂಡಲ ಸಂಗಮದೇವ||**

ಭಕ್ತ ಸ್ಥಳ ೨೩೮.

**ವಿವರಣೆ—** ನಿಜವಾದ ಸಂಗತಿಯನ್ನೇ ನುಡಿದು, ತಾನು ನುಡಿಯುವಂತೆಯೇ ಎಂತಹ ವಿಪತ್ತಿನಲ್ಲಿಯು ಕೂಡಾ ನಡೆದಾಗಲೇ ಪರಮಾತ್ಮನ ಒಲಿಮೆಯು ಪ್ರಾಪ್ತವಾಗುತ್ತದೆಯೇ ವಿನಾ ಸುಳ್ಳುಮಾತುಗಳನ್ನಾಡುತ್ತ ನುಡಿಯಲ್ಲೇನೋ ಪುರಾತನರಂತೆ ತೋರಿ, ನಡೆಯಲ್ಲಿ ಮಾತ್ರ ಕಿರಾತರಂತೆ ವರ್ತಿಸು

ವವರು ಪರಮಾತ್ಮನಲ್ಲಿ ಸೇರುವುದಿಲ್ಲವೆಂಬ ಸಂಗತಿಯು ಈ ವಚನದಲ್ಲಿ ವಿವರಿಸಲ್ಪಟ್ಟಿದೆ.

"ಜೀವನಿಗೆ ಒಡೆಯನಾದ ಶಿವನಿಗೂ, ಶಿವನ ಸೇವಕನಾದ ಜೀವನಿಗೂ ಐಕ್ಯವಾಗುವ ಮಾರ್ಗವಾವುದೆಂದರೆ, ಜೀವನು ಸತ್ಯವಾದುದನ್ನೇ ನುಡಿಯಬೇಕು; ಮತ್ತು ತಾನು ನುಡಿದಂತೆಯೇ ನಡೆಯಬೇಕು. ಮಾತುಕೊಟ್ಟು ತಪ್ಪುವಂಥ ಮತ್ತು ಸತ್ಯವಾದ ಮಾರ್ಗದಲ್ಲಿಯೇ ನಡೆದರೂ ವಿಪತ್ತು ಬಂದೊಡನೆ ಅದನ್ನು ಬಿಟ್ಟುಬಿಡುವಂಥ ಜೀವನಿಗೆ ಮೋಕ್ಷವು ಪ್ರಾಪ್ತವಾಗುವುದಿಲ್ಲ."

**(೪೨) ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ! ಸತ್ಯವ ನುಡಿವುದೇ ದೇವಲೋಕ! ಮಿಥ್ಯವ ನುಡಿವುದೇ ಮರ್ತ್ಯಲೋಕ! ಆಚಾರವೇ ಸ್ವರ್ಗ! ಅನಾಚಾರವೇ ನರಕ! ಕೂಡಲ ಸಂಗಮದೇವ ನೀವೇ ಪ್ರಮಾಣ||** ಭಕ್ತಸ್ಥಳ ೨೩೮.

**ವಿವರಣೆ**—ಸತ್ಯವೇ ಸ್ವರ್ಗ ಸುಖವನ್ನುಂಟುಮಾಡುತ್ತಿರುವುದರಿಂದ ಇದು ಸದಾಚಾರವಾಗಿಯೇ ಇದೆ. ಅಸತ್ಯವಾದರೋ ಜನನ-ಮರಣಗಳ ದುಃಖವನ್ನುಂಟುಮಾಡುವ ಮನುಷ್ಯಲೋಕಕ್ಕೆ ಜೀವನನ್ನು ತರಲು ಕಾರಣವಾಗಿರುವುದರಿಂದ ಇದು ಅನಾಚಾರವೇ ಸರಿ. 'ಸತ್ಯಮೇವ ಜಯತೇ ನಾನೃತಂ' 'ನಾಸ್ತಿ ಸತ್ಯಾತ್ಪರೋ ಧರ್ಮಃ' ಮೊದಲಾದ ಶ್ರುತಿವಚನಗಳಲ್ಲಿ ಉಕ್ತವಾಗಿರುವ ತತ್ವವೇ ಈ ವಚನದಲ್ಲಿ ವಿವರಿಸಲ್ಪಟ್ಟಿದೆ.

"ದೇವತೆಗಳು ಮತ್ತು ಮನುಷ್ಯರು ಇರತಕ್ಕಂಥ ಲೋಕಗಳು ಬೇರೆ ಬೇರೆಯಾಗಿವೆಯೆಂದು ತಿಳಿಯಬೇಡಿರಿ. ಸತ್ಯವನ್ನೇ ನುಡಿಯುವ ಸತ್ಯಸಂಧನಿಗೆ ಈ ಲೋಕವೇ ಸ್ವರ್ಗವಾಗುತ್ತದೆ. ಆದರೆ ಅಸತ್ಯವನ್ನು ನುಡಿಯುವ ಸುಳ್ಳುಗಾರನಿಗೆ ಈ ಲೋಕವೇ ಜನನಮರಣಗಳ ದುಃಖದಿಂದ ಕೂಡಿರುವ ಮನುಷ್ಯರ ಲೋಕವಾಗುತ್ತದೆ. ಆದಕಾರಣ ಸತ್ಯವು ಸ್ವರ್ಗ ಸುಖವನ್ನುಂಟುಮಾಡುವ ಸದಾಚಾರವಾಗಿದೆಯೆಂಬುದಕ್ಕೂ ಅಸತ್ಯವು ನರಕ ದುಃಖವನ್ನುಂಟುಮಾಡುವ ಅನಾಚಾರವಾಗಿದೆಯೆಂಬುದಕ್ಕೂ ಲಿಂಗದೇವನೇ, ನೀನೇ ಸಾಕ್ಷಿಯಾಗಿರುವಿ."

**(೪೩) ದಯವಿಲ್ಲದ ಧರ್ಮದಾವುದಯ್ಯ? ದಯವೇ ಬೇಕು ಸರ್ವ ಪ್ರಾಣಿಗಳಲ್ಲಿ! ದಯವೇ ಧರ್ಮದ ಮೂಲವಯ್ಯ! ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ||** ಭಕ್ತಸ್ಥಳ ೩೪೭.

**ವಿವರಣೆ**—ಪರಮಾತ್ಮನ ಒಲಿಮೆಗೆ ಸತ್ಯವು ಎಷ್ಟು ಆವಶ್ಯಕವಾಗಿದೆಯೋ ಅಷ್ಟೇ ಅಹಿಂಸೆಯೂ ಆಗತ್ಯವಾಗಿದೆ. ಪ್ರಾಣಿಗಳಲ್ಲಿ ದಯೆಯಿಲ್ಲದೆ ಅವುಗಳನ್ನು ನಾನಾ ರೀತಿಗಳಿಂದ ಹಿಂಸಿಸುವವರು ಸ್ನಾನ ಪೂಜಾದಿ ಎಷ್ಟೇ ಆಚಾರಗಳನ್ನು ಆಚರಿಸಿದರೂ ಅವರು ಪರಮಾತ್ಮನ ಕೃಪೆಗೆ ಪಾತ್ರರಾಗುವುದಿಲ್ಲ. 'ಅಹಿಂಸಾ ಪರಮೋಧರ್ಮಃ' 'ಮಾಹಿಂಸ್ಯಾತ್ಸರ್ವಭೂತಾನಿ' ಎಂಬ ಶ್ರುತಿ ವಚನಗಳ ಅಭಿಪ್ರಾಯವೇ ಈ ವಚನದಲ್ಲಿ ಉದಾಹರಿಸಲ್ಪಟ್ಟಿದೆ.

"ಇರಿವೆ ಮೊದಲಾಗಿ ಆನೆ ಕಡೆಯಾಗಿರುವ ಸಕಲ ಪ್ರಾಣಿಗಳಲ್ಲಿಯೂ ದಯೆಯಿರಬೇಕು. ಈ ವಿಧವಾದ ದಯೆಯಿಲ್ಲದಿರುವ ಧರ್ಮವೇನಾದರೂ ಇದೆಯೇ? ಎಂದರೆ ಈ ಪ್ರಕಾರ ದಯೆಯಿಲ್ಲದಿರುವುದಕ್ಕೆ ಧರ್ಮವೆಂದು ಹೇಳಬಾರದು. ಏಕೆಂದರೆ, ಧರ್ಮಕ್ಕೆ ಈ ಭೂತದಯೆಯೇ ಮೂಲವಾಗಿದೆ. ಆದಕಾರಣ ಇಂಥ ಭೂತದಯೆಯಿಲ್ಲದೆ ಯಾರು ಪ್ರಾಣಿಗಳನ್ನು ಕೊಂದು ಅಥವಾ ಕಷ್ಟಪಡಿಸಿ ಅವುಗಳಿಗೆ ಹಿಂಸೆಯನ್ನುಂಟುಮಾಡುತ್ತಾರೆಯೋ ಅವರನ್ನು ಲಿಂಗದೇವನು ತನ್ನಲ್ಲಿ ಸೇರಿಸಿಕೊಳ್ಳುವುದಿಲ್ಲ"

(೪೪) **ಅರತವಡಗದು| ಕ್ರೋಧ ತೊಲಗದು| ಕ್ರೂರ ಕುಭಾಷೆ ಕುಹಕ ಬಿಡದನ್ನಕ್ಕ| ನೀನೆತ್ತಲು? ಶಿವನೆತ್ತಲು? ಹೋಗತ್ತ ಮರುಳೆ| ಭವರೋಗವೆಂಬ ತಿಮಿರ ತೊಳೆಯದನ್ನಕ್ಕ ಕೂಡಲಸಂಗಯ್ಯನೆತ್ತ ನೀನೆತ್ತ ಮರುಳೆ?||** ಭಕ್ತಸ್ಥಳ ೧೩೧.

**ವಿವರಣೆ**—ಜೀವನಿಗೆ ಶಿವನು ದೊರೆಯಬೇಕಾದರೆ ಆತನಲ್ಲಿ ಯಾವ ಯಾವ ಗುಣಗಳಿರಬೇಕಾಗುತ್ತದೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ಹೊನ್ನು ಹೆಣ್ಣು ಮೊದಲಾದ ಪ್ರಾಪಂಚಿಕ ವಿಷಯಗಳಲ್ಲಿ ಅತ್ಯಾಶೆಯಿಳಿಯದೆ, ಕೋಪವು ಅಳಿಯದೆ, ಬಿರುನುಡಿ, ಕೆಟ್ಟ ಮಾತು ಪರಿಹಾಸ್ಯಗಳನ್ನು ಬಿಡದೆ ಇರತಕ್ಕ ಮರುಳು ಮನುಜನೇ, ನಿನಗೆ ಶಿವನು ಹೇಗೆ ತಾನೆ ದೊರೆಯುವನು? ಆತನು ಕೈಲಾಸದಲ್ಲಿದ್ದರೆ ನೀನು ನರಕದಲ್ಲಿರುತ್ತಿ, ಈ ಹುಟ್ಟುಸಾವುಗಳೆಂಬ ಭವರೋಗ ಬರಲು ಯಾವ ಅಜ್ಞಾನಜನ್ಯವಾದ ಗುಣಗಳು ಕಾರಣವಾಗಿವೆಯೆಂಬುದು ತಿಳಿಯುವನರೆಗೂ ಲಿಂಗದೇವನನ್ನು ನೀನು ಸೇರುವುದಿಲ್ಲ."

(೪೫) **ಹುತ್ತವ ಬಡಿದರೆ ಹಾವು ಸಾಯಬಲ್ಲುದೆ ಅಯ್ಯ| ಅಘೋರ ತಪವ ಮಾಡಿದರೇನು? ಅಂತರಂಗದ ಆತ್ಮ ಶುದ್ಧವಿಲ್ಲದವ**

**ರನೆಂತು ನಂಬುವನಯ್ಯ| ನಮ್ಮ ಕೂಡಲ ಸಂಗಮದೇವ ನಿನ್ನೆಂತು ಮೆಚ್ಚುವನಯ್ಯ||** **ಭಕ್ತಸ್ಥಳ ೧೧೭.**

**ವಿವರಣೆ**—ಮನಸ್ಸಿನಲ್ಲಿ ನಾನಾ ಕುಕಲ್ಪನೆಗಳನ್ನಿಟ್ಟುಕೊಂಡು ಎಂಥ ಜಪತಪಗಳನ್ನಾಚರಿಸಿದರೂ ಅವು ಮೋಕ್ಷಕ್ಕೆ ಸಾಧನವಾಗುವುದಿಲ್ಲ. ಆದಕಾರಣ ಮನಸ್ಸಿನ ನಿರ್ಮಲತೆಯೇ ಪರಮಾತ್ಮನ ಒಲಿಮೆಗೆ ಮುಖ್ಯ ಸಾಧನವಾಗಿದೆ ಯೆಂಬಂಶವು ಈ ವಚನದಲ್ಲಿ ವಿವರವಾಗಿದೆ.

"ಗೆದ್ದಲ ಹುಳಗಳಿಂದುಂಟಾದ ಮಣ್ಣಿನ ಹುತ್ತದಲ್ಲಿ ಒಂದು ಸರ್ಪವು ಬಂದು ಸೇರಿಕೊಂಡ ನಂತರ ಜನರು ಅದರಿಂದ ತಮಗೆ ಅಪಾಯ ಸಂಭವಿಸ ಬಾರದೆಂದು ಆ ಹುತ್ತಕ್ಕೆ ಹೊಡೆದರೆ ಅದರಲ್ಲಿರುವ ಸರ್ಪವು ಹೇಗೆ ಸಾಯುವದಿ ಲ್ಲವೋ, ಹಾಗೆಯೇ ಸತಿಪತಿಗಳಿಂದುಂಟಾದ ಮಣ್ಣಿನ ಕಾಯವೆಂಬೀ ಹುತ್ತದಲ್ಲಿ ರುವ ಮನಸ್ಸೆಂಬ ಸರ್ಪವನ್ನು, ಜೀವಾತ್ಮನು ತನಗೆ ಇದರಿಂದ ಅನರ್ಥ ಸಂಭವಿಸ ಬಾರದೆಂದು ಯೋಚಿಸಿ, ದೇಹವನ್ನು ಪಂಚಾಗ್ನಿಯ ಮಧ್ಯದಲ್ಲಿಟ್ಟು ಭಯಂಕರ ವಾದ ತಪಸ್ಸನ್ನು ಮಾಡಿದರೆ ದೇಹವು ಕೊರಗುವುದೇ ವಿನಾ ಒಳಗಿರುವ ಮನ ಸ್ಸೆಂಬ ಸರ್ಪವು ಮಾತ್ರ ಸಾಯುವುದಿಲ್ಲ. ಮನಸ್ಸಿನಲ್ಲಿರುವ ದುರ್ವಿಷಯಗಳು ದೂರಾಗಿ ಅಂತರಂಗವು ಭಕ್ತಿಜಲದಿಂದ ಪವಿತ್ರವಾದ ವಿನಾ ಲಿಂಗದೇವನು ಒಲಿಯುವುದಿಲ್ಲ"

(೪೭) **ಮಾರಿ ಮಸಣಿ ಎಂಬುವು ಬೇರಿಲ್ಲ ಕಾಣಿರೊ| ಮಾರಿ ಯೆಂಬುದೇನು? ಕಂಗಳು ತಪ್ಪಿ ನೋಡಿದರೆ ಮಾರಿ| ನಾಲಿಗೆ ತಪ್ಪಿ ನುಡಿ ದರೆ ಮಾರಿ| ನಮ್ಮ ಕೂಡಲಸಂಗಮದೇವರ ನೆನಹ ಮರೆದರೆ ಮಾರಿ||** **ಮಹೇಶ ಸ್ಥಳ ೧೦೪.**

**ವಿವರಣೆ**—ಮಾರೆವ್ವ, ಮಸಣೆವ್ವ ಮೊದಲಾದ ಕಾಡುವ ಮತ್ತು ಕಷ್ಟ ಕೊಡುವ ದೇವರುಗಳಿವೆಯೆಂದು ಅನೇಕರು ತಿಳಿದುಕೊಂಡು ತಮಗೆ ಅವುಗಳ ಕಾಟವಾಗಬಾರದೆಂದು ಕುರಿ ಕೋಳಿಗಳನ್ನು ಕೊಲ್ಲಿಸುವ ಮೊದಲಾದ ಅನೇಕ ಹರಕೆಗಳನ್ನು ಹೇಳಿಕೊಂಡು ಅನಾಚಾರಗಳಿಂದ ಆಚರಿಸುತ್ತಿದ್ದಾರಷ್ಟೆ. ಇದು ಸರಿಯಲ್ಲ; ನಮ್ಮಲ್ಲಿರುವ ಕಾಮ ಕ್ರೋಧಾದಿ ದುರ್ಗುಣಗಳೇ ನಮಗೆ ಮಾರಿಯಾ ಗಿರುವುದರಿಂದ ಇವುಗಳನ್ನು ಜಯಿಸಬೇಕೆಂದು ಈ ವಚನದಲ್ಲಿ ಹೇಳಲ್ಪಟ್ಟಿದೆ.

"ಮಾರಿ ಮಸಣಿ ಮೊದಲಾದ ಕಾಡುವ ಬೇರೆ ದೇವರುಗಳಿಲ್ಲ. ಕಣ್ಣು ಗಳು ಪರಧನ, ಪರಸ್ತ್ರೀ ಮೊದಲಾದ ವಿಷಯಗಳನ್ನು ಅಪಹರಿಸಬೇಕೆಂಬ ಪಾಪ

ದೃಷ್ಟಿಯಿಂದ ನೋಡಿದರೆ ಅಲ್ಲಿಯೇ ಮಾರಿಮ್ಮನು ಹುಟ್ಟಿ, ಅನೇಕ ದುಃಖಗಳಿಗೀಡುಮಾಡುತ್ತಾಳೆ. ಅಸತ್ಯ ದುರ್ಭಾಷಣಗಳನ್ನಾಡಿದರೆ ಆ ನಾಲಿಗೆಯಲ್ಲೇ ಮಸಣೆವ್ವನು ಹುಟ್ಟಿ ದ್ವೇಷಗಳ ರೂಪದಲ್ಲಿ ದುಃಖವನ್ನುಂಟುಮಾಡುತ್ತಾಳೆ. ಆದಕಾರಣ ಲಿಂಗದೇವನನ್ನು ಮರೆತು ವಿಷಯಗಳಲ್ಲಿ ಪ್ರವೇಶಿಸಿದರೆ ಆಗ ಮಾರಿಗೆ ಎಂದರೆ ದುಃಖಕ್ಕೀಡಾಗಬೇಕಾಗುತ್ತದೆ."

**(೪೭) ತೊರೆಯ ಮಿಂಬಣ್ಣಗಳಿರಾ| ತೊರೆಯ ಮಿಂಬ ಸ್ವಾಮಿಗಳಿರಾ| ತೊರೆಯಿಂ ಬೊ ತೊರೆಯಿಂಬೊ| ಪರನಾರಿಯರ ಸಂಗವ ತೊರೆಯಿಂಬೋ| ಪರಧನದಾಶೆಯಾಮಿಷವ ತೊರೆಯಿಂಬೋ| ಇವ ತೊರೆಯದೆ ಹೋಗಿ ತೊರೆಯಲ್ಲಿ ಮಿಂದರೆ| ನಿಮ್ಮ ತೊರೆಯೆಲ್ಲ ಬರುದೊರೆ ಹೋಹುದು ಕೂಡಲ ಸಂಗಮದೇವ||** ಮಹೇಶ ಸ್ಥಳ ೧೧೭.

ವಿವರಣೆ--ಪರಸ್ತ್ರೀ ಸಂಗವನ್ನೂ, ಪರಧನಾಪಹಾರವನ್ನೂ ಬಿಡುವುದರಿಂದ ಗಂಗಾ, ಯಮುನಾ ಮೊದಲಾದ ಪುಣ್ಯ ನದಿಗಳಲ್ಲಿ, ಸ್ನಾನ ಮಾಡಿದ್ದರಿಂದ ಬರುವ ಪುಣ್ಯಕ್ಕಿಂತಲೂ, ಶ್ರೇಷ್ಠತರವಾದ ಫಲವು ಪ್ರಾಪ್ತವಾಗುತ್ತದೆ. ಆದರೆ ಈ ದುರಾಚಾರಗಳನ್ನು ಮಾತ್ರ ಬಿಡದೆ ಎಂಥ ಪುಣ್ಯನದಿಗಳಲ್ಲಿ ಹೋಗಿ ಸ್ನಾನ ಮಾಡಿದರೂ ಆ ಪಾಪಿಗಳಿಗೆ ಸ್ನಾನದ ಪುಣ್ಯವು ದೊರೆಯುವುದಿಲ್ಲವಾದುದರಿಂದ ಆಚರಣೆಯನ್ನು ಪವಿತ್ರವಾಗಿಟ್ಟುಕೊಳ್ಳಬೇಕೆಂದು ಈ ವಚನದಲ್ಲಿ ಬೋಧಿಸಿದ್ದಾರೆ.

"ಪುಣ್ಯಕ್ಷೇತ್ರಗಳು, ಪುಣ್ಯ ಜಲಾಶಯಗಳೆಂದು ತಿಳಿದು ಅಲ್ಲಿಗೆ ಹೋಗಿ ಸ್ನಾನ ಮಾಡುತ್ತಿರುವ ಅಣ್ಣಗಳಿರಾ ಮತ್ತು ಸ್ವಾಮಿಗಳಿರಾ, ನೀವು ಪರಸ್ತ್ರೀಯರ ಸಂಗವನ್ನು ಮತ್ತು ಪರಧನದ ಆಶೆಯನ್ನು ಮೊದಲು ತೊರೆಯಿರಿ. ಈ ದುರ್ಗುಣ ದುರಾಚಾರಗಳನ್ನು ಬಿಡದೆ ಎಂಥ ತೊರೆಯಲ್ಲಿ ಎಂದರೆ ನೀರಲ್ಲಿ ನೀವು ಸ್ನಾನ ಮಾಡಿದರೂ ಅದು ನಿಮ್ಮ ಪಾಲಿಗೆ ಬರೀ ನೀರಾಗಿ ಪರಿಣಮಿಸುವುದಲ್ಲದೆ ಪುಣ್ಯ ಜಲಾಶಯವಾಗುವುದಿಲ್ಲ."

**(೪೮) ಸಾರ ಸಜ್ಜನರ ಸಂಗವ ಮಾಡುವದು| ದೂರ ದುರ್ಜನರ ಸಂಗ ಬೇಡವಯ್ಯ| ಆವ ಹಾವಾದಡೇನು? ವಿಷವೊಂದೇ| ಅಂಥವರ ಸಂಗ ನಮಗೆ ಬೇಡವಯ್ಯ| ಅಂತರಂಗ ಶುದ್ಧವಿಲ್ಲದವರ ಸಂಗ ಶಿಂಗಿ ಕಾಳಕೂಟ ವಿಷವೋ ಕೂಡಲಸಂಗಮದೇವ||**

**ವಿವರಣೆ**—ಮನುಷ್ಯನು ಯಾರ ಸಹಾಯವೂ ಇಲ್ಲದೆ ಜೀವಿಸುವುದು ಪ್ರಾಯಶಃ ಅಸಾಧ್ಯವೇ ಸರಿ. ಆದಕಾರಣ ಸತ್ಯ, ದಯೆ, ವಿನಯಾದಿ ಸದ್ಗುಣಗಳುಳ್ಳವರ ಸಹವಾಸದಲ್ಲಿಯೇ ಇರಬೇಕೆ ವಿನಾ ಸುಳ್ಳು, ಕಳವು, ಹಿಂಸೆ, ವ್ಯಭಿಚಾರಾದಿ ದುರಾಚಾರಗಳಿಂದ ಯಾರ ಅಂತರಂಗವು ಅಪವಿತ್ರವಾಗಿರುತ್ತದೆಯೋ ಅವರ ಸಹವಾಸವನ್ನು ಮಾಡಬಾರದು. ಏಕೆಂದರೆ ದುರ್ಗುಣಿಗಳು ಸರ್ಪದಂತೆ ವಿಷಪ್ರಾಣಿಗಳಾಗಿರುವುದರಿಂದ ಅಂಥವರ ಸಹವಾಸವು ಸರ್ಪದ ಸಹವಾಸದಂತೆ ದುಃಖಕ್ಕೀಡುಮಾಡುತ್ತದೆಂದು ಈ ವಚನದಲ್ಲಿ ವಿವರಿಸಿದ್ದಾರೆ

"ಸದ್ಗುಣ ಸದಾಚಾರಗಳುಳ್ಳ ಸಜ್ಜನರ ಸಹವಾಸವೇ ಸುಖವನ್ನುಂಟು ಮಾಡುವುದರಿಂದ ಅಂಥವರ ಸಹವಾಸವನ್ನು ಮಾಡಬೇಕು. ಯಾವ ಹಾವಿನ ವಿಷವಾದರೂ ಹೇಗೆ ಅಪಾಯವನ್ನೇ ಉಂಟುಮಾಡುತ್ತದೆಯೋ, ಹಾಗೆಯೇ ಕಳವು, ವ್ಯಭಿಚಾರಾದಿ ಯಾವ ದುರ್ಗುಣವುಳ್ಳವರ ಸಂಗವಾದರೂ ದುಃಖವನ್ನೇ ಉಂಟು ಮಾಡುವುದರಿಂದ ಅಂತಃಕರಣ ಶುದ್ಧವಿಲ್ಲದವರ ಸಹವಾಸವು ಕಾಳಕೂಟ ವಿಷದಂತೆ ಭಯಂಕರ ಅಪಾಯಕರವಾದುದಾಗಿದೆ.

**(೪೯) ಗಿಳಿಯೋದಿ ಫಲವೇನು? ಬೆಕ್ಕು ಬಹುದ ಹೇಳಲರಿಯದು| ಜಗವನೆಲ್ಲವ ಕಾಂಬುವ ಕಣ್ಣು ತನ್ನ ತಾ ಕಾಣಲರಿಯದು| ಇದಿರ ಗುಣವಬಲ್ಲೆವೆಂಬರು ತಮ್ಮ ಗುಣವನರಿಯರು ಕೂಡಲ ಸಂಗಮದೇವ||**

**ವಿವರಣೆ**—ಯಾರು ತಮ್ಮಲ್ಲಿರುವ ದೋಷಗಳನ್ನರಿತುಕೊಂಡು ಅವುಗಳನ್ನು ನಿವಾರಣೆ ಮಾಡಿಕೊಳ್ಳಲು ಪ್ರಯತ್ನಿಸುತ್ತಾರೆಯೋ ಅವರು ಆತ್ಮೋನ್ನತಿಯನ್ನೂ, ಆ ಮೂಲಕ ಸುಖಶಾಂತಿಗಳನ್ನೂ ಹೊಂದುವರೇ ವಿನಾ ಗಿಳಿಯಂತೆ ಅನೇಕ ಶಾಸ್ತ್ರಗಳನ್ನು ಕಲಿತು ಪಂಡಿತರಾಗಿ ಅನ್ಯರ ದೋಷಗಳನ್ನು ಎತ್ತಿ ಆಡುವುದರಲ್ಲಿಯೇ ಆಯುಷ್ಯವನ್ನು ಕಳೆಯುವವರು ನಿಜವಾದ ಸುಖಸಮಾಧಾನಗಳನ್ನು ಹೊಂದುವುದಿಲ್ಲವೆಂದು ಈ ವಚನದಲ್ಲಿ ವಿವರಿಸಿದ್ದಾರೆ.

"ಗಿಳಿಯು ನಾನಾ ಶಾಸ್ತ್ರಗಳನ್ನು ಕಲಿತಿದ್ದರೂ ಬೆಕ್ಕು ಅದನ್ನು ಹಿಡಿಯ್ಲಲಿಕ್ಕೆಬಂದಾಗ 'ಬೆಕ್ಕನನ್ನನ್ನುತಿನ್ನಲಿಕ್ಕೆಬಂತು ಬಿಡಿಸಿಕೊಳ್ಳಿ' ಎಂದು ಮೊರೆಯಿಟ್ಟು ಬೆಕ್ಕಿನ ಬಾಯಿಗೆ ಸಿಲ್ಕದೆ ಪಾರಾಗಿ ಹೋಗುವುದೊಂದನ್ನು ಮಾತ್ರ ಅರಿತುಕೊಳ್ಳದಿದ್ದರೆ ಹೇಗೆ ಆ ಶಾಸ್ತ್ರವನ್ನು ಕಲಿತಗಿಳಿಯು ಬೆಕ್ಕಿಗೆ ತುತ್ತಾಗಬೇಕಾಗುತ್ತದೆಯೋ, ಹಾಗೆಯೇ ವೇದವೇದಾಂತಾದಿ ನಾನಾ ಶಾಸ್ತ್ರಗಳನ್ನು ಗಿಳಿಯ ಹಾಗೆ ನುಡಿಯಲು

ಮಾತ್ರ ಕಲಿತವರು ಯಮನೆಂಬ ಬೆಕ್ಕು ಬಂದು ಹಿಡಿದುಕೊಂಡು ಹೋಗುವಾಗ ತನ್ನನ್ನು ರಕ್ಷಿಸೆಂದು ಲಿಂಗದೇವನನ್ನು ಪ್ರಾರ್ಥಿಸಿಕೊಳ್ಳಲು ಅಸಮರ್ಥರಾಗುತ್ತಾರೆ. ಇಂಥವರು ಕಣ್ಣು ಹೇಗೆ ಜಗತ್ತಿನ ನಾನಾ ಚಿತ್ರವಿಚಿತ್ರಗಳನ್ನು ನೋಡುತ್ತಲಿದ್ದರೂ ತನ್ನಲ್ಲಿ ಕಸಕಡ್ಡಿ ಬಿದ್ದುದನ್ನು ನೋಡಿಕೊಳ್ಳಲು ಹೇಗೆ ಅಸಮರ್ಥವಾದುದಾಗಿದೆಯೋ, ಹಾಗೆಯೇ ಅನ್ಯರ ಅವಗುಣಗಳನ್ನು ಬಲ್ಲೆವೆಂದು ಅವುಗಳನ್ನು ಎತ್ತಿ ಆಡಲುಬಲ್ಲರೇ ವಿನಾ ತಮ್ಮಲ್ಲಿರುವ ದುರ್ಗುಣಗಳನ್ನು ನೋಡಿಕೊಂಡು ಅವುಗಳನ್ನು ತೆಗೆದುಹಾಕಲು ಪ್ರಯತ್ನಿಸುವುದಿಲ್ಲ"

(೫೦) **ಹರಿವಹಾವಿಗಂಜೆ| ಉರಿಯ ನಾಲಿಗೆಗಂಜೆ| ಸುರಿಗೆಯ ಮೊನೆಗಂಜೆ| ಒಂದಕ್ಕಂಜುವೆ, ಒಂದಕ್ಕಳುಕುವೆ| ಪರಸ್ತ್ರೀ ಪರಧನವೆಂಬ ಜೂಜಿಂಗಂಜುವೆ| ಮುನ್ನಂಜದ ರಾವಣನೇನು ವಿಧಿಯಾದ? ನಾನಂಜುವೆನಯ್ಯ ಕೂಡಲ ಸಂಗಮದೇವ||** ಭಕ್ತ ಸ್ಥಳ ೪೪೫.

**ವಿವರಣೆ**—ಸಜ್ಜನರು ಪಾಪಕ್ಕೆ ಅಂಜುವರಲ್ಲದೆ ಮರಣಕ್ಕೆ ಎಂದಿಗೂ ಅಂಜುವುದಿಲ್ಲ ಹಾವು, ಬೆಂಕಿ, ಶಸ್ತ್ರ ಮೊದಲಾದವುಗಳಿಂದ ಮರಣ ಪ್ರಾಪ್ತವಾದರೆ ಈ ದೇಹಕ್ಕೆ ಮರಣ ಲಭಿಸಿತೆಂತಲೂ ಇದು ಎಂದಾದರೂ ಪ್ರಾಪ್ತವಾಗತಕ್ಕದ್ದಾಗಿಯೇ ಇದ್ದಿತೆಂತಲೂ ಭಾವಿಸಿ, ಸಜ್ಜನರು ಇಂಥ ಮರಣಗಳಿಗೆ ಭಯಪಡುವುದಿಲ್ಲ. ಆದರೆ ಪರಸ್ತ್ರೀ, ಪರಧನಾಪಹಾರಗಳಿಂದ ಬರುವ ಅಪಕೀರ್ತಿಯು ಈ ದೇಹ ಇರುವವರೆಗೂ ಮರಣಪ್ರಾಯವಾದ ದುಃಖವನ್ನುಂಟುಮಾಡುವವಲ್ಲದೆ, ಈ ಪಾಪಾಚರಣೆಯು ಜೀವನಿಗೆ ಈ ದೇಹವನ್ನು ಬಿಟ್ಟ ನಂತರದಲ್ಲ ಅನೇಕ ಯಾತನೆಗಳನ್ನುಂಟುಮಾಡುವದೆಂಬ ತಿಳುವಳಿಕೆಯು ಸಜ್ಜನರಿಗಿರುವುದರಿಂದ ಇವರು ಪಾಪಾಚರಣೆಗಳಿಗೆ ಮಾತ್ರ ಅಂಜುತ್ತಾರೆಯೇ ವಿನಾ ಮರಣಕ್ಕು ಕೂಡಾ ಭಯಪಡುವುದಿಲ್ಲವೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ಘೋರ ಸರ್ಪವು ಮೈಮೇಲೆ ಬಂದರೂ ನಾನು ಅಂಜುವುದಿಲ್ಲ. ಅಗ್ನಿಯು ನಾನಾ ಮುಖಗಳಿಂದ ನನ್ನನ್ನು ವ್ಯಾಪಿಸಿದರೂ ನಾನು ಭಯ ಪಡುವುದಿಲ್ಲ. ತೀಕ್ಷ್ಣವಾದ ಶಸ್ತ್ರವು ನಾಟಿದರೂ ನಾನು ಹೆದರುವುದಿಲ್ಲ ಆದರೆ ಪರಸ್ತ್ರೀಸಂಗ, ಪರಧನಾಪಹಾರಕ್ಕೆ ಮಾತ್ರ ನಾನು ಬಹು ಭಯಪಡುತ್ತೇನೆ ಏಕೆಂದರೆ, ಈ ಪಾಪಾಚರಣೆಗಳಿಗೆ ಹೆದರದಿದ್ದ ರಾವಣನು ಮರಣಕ್ಕೂ ಅಪಕೀರ್ತಿಗೂ ಕಾರಣನಾಗಲಿಲ್ಲವೆ? ಆದಕಾರಣ ಲಿಂಗದೇವನೇ, ನಾನು ಈ ಪಾಪಾಚರಣೆಗಳಿಗೆ ಅಂಜುವೆನು."

**(೩೧) ಕೊಲ್ಲೆನಯ್ಯ ಪ್ರಾಣಿಗಳ| ಮೆಲ್ಲೆನಯ್ಯ ಬಾಯಿಚ್ಛೆಗೆ| ಒಲ್ಲೆನಯ್ಯ ಪರಸತಿಯ ಸಂಗವ| ಬಲ್ಲೆನಯ್ಯ ಮುಂದೆ ತೊಡಕುಂಟೆಂಬುದ| ಬಳ್ಳದ ಬಾಯಂತೆ ಒಂದೇ ಮನವ ಮಾಡಿ ನಿಲ್ಲೆಂದು ನಿಲಿಸಯ್ಯ ಕೂಡಲಸಂಗಮದೇವ||** ಭಕ್ತ ಸ್ಥಳ ೨೧೦.

**ವಿವರಣೆ**—ಹಿಂಸೆಯು ನಿರ್ದಯೆಯ ಲಕ್ಷಣವಾಗಿದೆ. ಆದಕಾರಣ ಯಾವ ಪ್ರಾಣಿಯನ್ನು ಯಾವ ಕಾರಣದಿಂದ ಕೊಲ್ಲುವುದಾದರೂ ವಿಶ್ವಪ್ರೇಮಕ್ಕೆ ಭಂಗವನ್ನುಂಟುಮಾಡದೆ ಬಿಡುವುದೇ ಇಲ್ಲ. ನಾಲಿಗೆಯ ರುಚಿಗೆ ಮನಸೋತು ಮದ್ಯ, ಮಾಂಸ ಮೊದಲಾದ ಮಾದಕ ಮತ್ತು ನಿಷಿದ್ಧ ಪದಾರ್ಥಗಳನ್ನು ಸೇವಿಸಿದರೆ ಮನುಷ್ಯನ ಮನ-ಬುದ್ಧಿಗಳು ದೂಷಿತವಾಗಿ ಪಾಪಾಚರಣೆಗಳಲ್ಲಿ ಮಗ್ನವಾಗುತ್ತವೆ ಏಕೆಂದರೆ, ಆಹಾರಾನುಗುಣ್ಯವಾಗಿಯೇ ಮನೋಬುದ್ಧಿಗಳುಂಟಾಗುತ್ತವೆ. ಪರಸ್ತ್ರೀ ಸಂಗವಾದರೋ ತನು, ಮನ, ಧನ, ಪ್ರಾಣಗಳ ನಾಶಕ್ಕೆ ಕಾರಣವಾಗಿರುವುದು. ಆದ ಪ್ರಯುಕ್ತ ಹಿಂಸೆ, ನಾಲಿಗೆಯ ದಾಸತ್ವ, ವ್ಯಭಿಚಾರ ಈ ತ್ರಿದೋಷಗಳು ಇಹಪರ ಸುಖಶಾಂತಿಗಳನ್ನುಂಟುಮಾಡತಕ್ಕವಲ್ಲವಾದುದರಿಂದ ಈ ಮೂರು ಪಾಪಕೃತ್ಯಗಳನ್ನು ಆಚರಿಸಬಾರದೆಂದು ಈ ವಚನದಲ್ಲಿ ಹೇಳಿದೆ.

"ಯಾವ ಪ್ರಾಣಿಯನ್ನೂ ಕೊಲ್ಲುವುದಿಲ್ಲ. ನಾಲಿಗೆಯ ರುಚಿಗಾಗಿ ಯಾವುದನ್ನೂ ತಿನ್ನುವುದಿಲ್ಲ. ಮತ್ತು ಪರಸ್ತ್ರೀ ಸಂಗವನ್ನು ಮಾಡುವುದಿಲ್ಲ ಏಕೆಂದರೆ ಇವು ಮೋಕ್ಷಕ್ಕೆ ವಿಘ್ನವನ್ನುಂಟುಮಾಡತಕ್ಕವೆಂಬುದನ್ನು ನಾನು ಬಲ್ಲೆನು. ಆದಕಾರಣ ಲಿಂಗದೇವನೆ, ಕೊಳಗದ (ಧಾನ್ಯವನ್ನಳೆಯುವ ಬಳ್ಳ) ಬಾಯಿಯ ಹಾಗೆ ನನ್ನ ಮನಸ್ಸಿಗೆ ಒಂದೇ ಮುಖಮಾಡಿ (ನಿನ್ನ ಧ್ಯಾನದಲ್ಲಿ ಇರುವಂತೆ) ಇದನ್ನು ನಿಲ್ಲಿಸು."

**(೩೨) ಕಳಬೇಡ| ಕೊಲಬೇಡ| ಹುಸಿಯ ನುಡಿಯಲು ಬೇಡ| ಅಸೂಯೆ ಪಡಬೇಡ| ತನ್ನ ಬಣ್ಣಿಸಬೇಡ| ಇದಿರು ಹಳಿಯಲು ಬೇಡ| ಇದೇ ಅಂತರಂಗ ಶುದ್ಧಿ| ಇದೇ ಬಹಿರಂಗ ಶುದ್ಧಿ| ಇದೇ ನಮ್ಮ ಕೂಡಲ ಸಂಗನನೊಲಿಸುವ ಪರಿ||** ಭಕ್ತಸ್ಥಳ ೨೩೪

**ವಿವರಣೆ**—ಸ್ನಾನಾದಿ ಬಾಹ್ಯ ಕ್ರಿಯೆಗಳು ಕೇವಲ ಬಹಿರಂಗವನ್ನೇ ಶುದ್ಧಗೊಳಿಸುತ್ತಿದ್ದರೆ ಸತ್ಯ, ಅಹಿಂಸೆ ಮೊದಲಾದ ಸದ್ಗುಣಗಳು ಪರಮಾತ್ಮನ ಮೆಚ್ಚಿಗೆಗೆ ಕಾರಣವಾಗುವಂತೆ ಅಂತರಂಗ ಮತ್ತು ಬಹಿರಂಗ ಇವೆರಡನ್ನೂ ಶುದ್ಧಗೊಳಿಸುವುದರಿಂದ ಮೋಕ್ಷಾಪೇಕ್ಷಿಯು ಸದ್ಗುಣಶಾಲಿಯಾಗಬೇಕೆಂದು ಈ ವಚನದಲ್ಲಿ ವಿವರಿಸಿದ್ದಾರೆ

"ಅನ್ಯರ ಧನಧಾನ್ಯಾದಿ ಯಾವ ಪದಾರ್ಥಗಳನ್ನೂ ಕದಿಯಬೇಡ; ಮತ್ತು ಅವುಗಳನ್ನು ಅಪಹರಿಸುವ ಯೋಚನೆಯನ್ನು ಮನಸ್ಸಿನಲ್ಲಿಯೂ ಮಾಡಬೇಡ. ಯಾವ ಪ್ರಾಣಿಯನ್ನೂ ಯಾವ ನಿಮಿತ್ತದಿಂದಲೂ ಕೊಲ್ಲಬೇಡ; ಮತ್ತು ಮನಸ್ಸಿನಲ್ಲಿ ಅವುಗಳ ಬಗ್ಗೆ ದ್ವೇಷವನ್ನಿಟ್ಟುಕೊಂಡು ಅವುಗಳ ಅಹಿತವನ್ನು ಚಿಂತಿಸಬೇಡ, ಅಥವಾ ಅವುಗಳಿಗೆ ಅಪಾಯ ಸಂಭವಿಸಿದಾಗ ಸಂತೋಷಪಡಬೇಡ. ಎಂಥ ಸಮಯದಲ್ಲಾದರೂ ಸುಳ್ಳು ಮಾತನ್ನಾಡಬೇಡ, ಮತ್ತು ಮನುಷ್ಯನಲ್ಲಿ ಸುಳ್ಳಿನ ಬಗ್ಗೆ ಆದರವುಳ್ಳವನಾಗಿ ಈ ಪ್ರಪಂಚವು ಸತ್ಯವೆಂದು ಸುಳ್ಳು ಕಲ್ಪನೆಯನ್ನಿಟ್ಟುಕೊಂಡಿರಬೇಡ; ಮತ್ತು ಪರರ ಅಭಿವೃದ್ಧಿಯನ್ನು ಕಂಡು ಮನಸ್ಸಿನಲ್ಲಿ ಮರುಗಬೇಡ. ನಾನು ಇಂಥವನು ಅಂಥವನು ಎಂದು ನಿನ್ನನ್ನು ನೀನು ಕೊಂಡಾಡಿಕೊಳ್ಳಬೇಡ, ಮತ್ತು ಮನಸ್ಸಿನಲ್ಲಿ ನಾನೇ ಸಂಪನ್ನನು, ಹೆಚ್ಚಿನವನು ಎಂದು ಹಿಗ್ಗಿಕೊಂಡಿರಬೇಡ. ಅವರು ಹಾಗೆ ಹೀಗೆ ಎಂದು ಇಲ್ಲದ ದೋಷಗಳನ್ನು ಅನ್ಯರ ಮೇಲೆ ಆರೋಪಿಸಿ ಹಳಿಯಬೇಡ, ಮನಸ್ಸಿನಲ್ಲಿ ಅನ್ಯರು ತನಗಿಂತ ಕಡಿಮೆಯವರೆಂದು ಅವರ ವಿಷಯದಲ್ಲಿ ತಿರಸ್ಕಾರ ಭಾವನೆಯುಳ್ಳವನಾಗಿರಬೇಡ. ಈ ಪ್ರಕಾರ ವರ್ತಿಸಿದರೆ ಅಂತರಂಗ ಮತ್ತು ಬಹಿರಂಗ ಇವೆರಡೂ ಶುದ್ಧವಾಗುತ್ತವೆ ಲಿಂಗದೇವನ ಪ್ರೇಮಕ್ಕೆ ಪಾತ್ರರಾಗಲು ಈ ಪ್ರಕಾರ ಸದ್ಗುಣಗಳಿಂದ ಶುದ್ಧರಾಗುವುದೇ ಮುಖ್ಯ ಸಾಧನೆಯಾಗಿದೆ.

---

# ೪ನೆಯ ಅಧ್ಯಾಯ.



**(೪೩) ಆಡಿದರೇನು| ಹಾಡಿದರೇನು| ಓದಿದರೇನು| ತ್ರಿವಿಧ ದಾಸೋಹವಿಲ್ಲದನ್ನಕ್ಕ? ಆಡದೆ ನವಿಲು? ಹಾಡದೆ ತಂತಿ? ಓದದೆ ಗಿಳಿ? ಭಕ್ತಿ ಇಲ್ಲದವರನೊಲ್ಲ ನಮ್ಮ ಕೂಡಲ ಸಂಗಮದೇವ||** ಭಕ್ತ ಸ್ಥಳ ೨೦೭.

**ವಿವರಣೆ**— ಮನುಷ್ಯನಿಗೆ ತನ್ನ ಪ್ರಾಣದಮೇಲೆ ಎಷ್ಟು ಪ್ರೇಮವಿರುತ್ತದೆಯೋ ಅದಕ್ಕಿಂತಲೂ ಹೆಚ್ಚಾದ ಪ್ರೇಮಾದರಗಳು ಪರಮಾತ್ಮನಲ್ಲಿರುವುದೇ ನಿಜವಾದ ಭಕ್ತಿಯಾಗಿದೆ. ಇಂಥ ಭಕ್ತಿ ಇಲ್ಲದವರಿಗೆ ಪರಮಾತ್ಮನು ಒಲಿಯುವುದಿಲ್ಲ. ಇಂಥ ಭಕ್ತಿಯು ದೇವರ ಮುಂದೆ ಕುಣಿದಾಡುವುದರಿಂದಾಗಲೀ, ಅನೇಕ ಪ್ರಕಾರ ದೇವರನ್ನು ಪೂಜಿಸಿ ಆತನ ನಾನಾ ಸ್ತುತಿಗಳನ್ನು ಮಾಡುವುದರಿಂದಾಗಲೀ

ಇದೆಯೆಂದು ತಿಳಿಯಬಾರದು. ಇಂಥ ಬಾಹ್ಯಾಡಂಬರದ ನಡತೆಗಳೇ ಭಕ್ತಿಯ ಲಕ್ಷಣಗಳಲ್ಲ. ಗುರುಸೇವೆಗೆ ತನ್ನ ದೇಹವನ್ನು, ಪರಮಾತ್ಮನ ಧ್ಯಾನಕ್ಕೆ ತನ್ನ ಮನಸ್ಸನ್ನು ಕೊಡುವುದಲ್ಲದೆ ಕೊನೆಗೆ ಪರಮಾತ್ಮನಲ್ಲಿ ಆತ್ಮಾರ್ಪಣೆಯನ್ನು ಮಾಡುವುದೇ ನಿಜವಾದ ಭಕ್ತಿಯು. ಇಂಥ ಭಕ್ತಿಯು ಅಳವಡದಿದ್ದರೆ ಮೋಕ್ಷವು ಪ್ರಾಪ್ತವಾಗುವುದಿಲ್ಲವೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ದೇವರ ಮುಂದೆ ಎಷ್ಟೇ ಕುಣಿದಾಡಿದರಾಗಲಿ ಅಥವಾ ಆ ಲಿಂಗಮೂರ್ತಿಯ ಮಹಿಮೆಯನ್ನು ಕುರಿತು ಎಷ್ಟೇ ಹಾಡಿದರಾಗಲಿ, ಇಲ್ಲವೆ ಲಿಂಗತತ್ವವನ್ನು ತಿಳಿಸುವ ವೇದ ವೇದಾಂತಾದಿ ನಾನಾ ಶಾಸ್ತ್ರಗಳನ್ನು ಓದಿ ಪಂಡಿತರಾದರಾಗಲಿ, ಗುರುಲಿಂಗ ಜಂಗಮಗಳೆಂಬ ಮೂರು ರೂಪಗಳಲ್ಲಿ ತೋರುತ್ತಿರುವ ಆ ಪರಮಾತ್ಮನಿಗೆ ತನ್ನ ತನು, ಮನ, ಧನ (ಆತ್ಮ) ಗಳನ್ನು ಅರ್ಪಿಸಿದ ವಿನಾ ಮೋಕ್ಷಪ್ರಾಪ್ತಿಯಾಗುವುದಿಲ್ಲ. ಕುಣಿದಾಡುವುದರಿಂದಲೇ ಮೋಕ್ಷ ದೊರೆಯುತ್ತಿದ್ದರೆ ನವಿಲು ನಮಗಿಂತ ಚೆನ್ನಾಗಿ ಕುಣಿಯುತ್ತಿರುವುದರಿಂದ ಅದಕ್ಕೂ ಮೋಕ್ಷ ದೊರೆಯಬೇಕಾಗಿದ್ದಿತು. ನಮ್ಮ ಮಂಜುಳ ಸ್ವರಕ್ಕೇನೇ ಪರಮಾತ್ಮನು ಮೆಚ್ಚುವುದಾಗಿದ್ದರೆ ತಂತಿಯ ಸ್ವರವು ಬಹು ಮನೋಹರವಾಗಿರುವುದರಿಂದ ತಂತಿಗೂ ದೇವರು ಒಲಿಯುತ್ತಿದ್ದನು. ಶಾಸ್ತ್ರವನ್ನು ಕಲಿತು ಮಾತನಾಡುವವರಿಗೆಲ್ಲಾ ಮೋಕ್ಷ ಲಭಿಸುತ್ತಿದ್ದರೆ, ಗಿಳಿಗಳೂ ಶಾಸ್ತ್ರವನ್ನು ಕಲಿಯುವುದರಿಂದ ಅವುಗಳಿಗೂ ಮೋಕ್ಷವಾಗಬೇಕಾಗಿದ್ದಿತು. ಆದಕಾರಣ ಭಕ್ತಿಯ ವಿನಾ ಈ ಬಾಹ್ಯಾಡಂಬರಗಳಿಗೆ ಲಿಂಗದೇವನು ಮೆಚ್ಚುವುದಿಲ್ಲ ಆ ಭಕ್ತಿಯು ಅಳವಟ್ಟುದುದಕ್ಕೆ ಗುರು, ಲಿಂಗ, ಜಂಗಮಗಳಿಗೆ ತನುಮನ ಧನಗಳನ್ನು ಅರ್ಪಿಸುವುದೇ ದೃಷ್ಟಾಂತವಾಗಿದೆ"

**(೫೪) ಕಾಗೆಯೊಂದಗುಳ ಕಂಡರೆ ಕರೆಯದೆ ತನ್ನ ಬಳಗವನು| ಕೋಳಿಯೊಂದು ಗುಟುಕ ಕಂಡರೆ ಕೂಗಿ ಕರೆಯದೆ ತನ್ನ ಕುಲವನೆಲ್ಲವನು?| ಶಿವಭಕ್ತನಾಗಿ ಭಕ್ತಿ ಪಕ್ಷವಿಲ್ಲದಿದ್ದರೆ ಕಾಗೆ ಕೋಳಿಗಳಿಂದ ಕರ ಕಷ್ಟ ಕಾಣಾ ಕೂಡಲ ಸಂಗಮದೇವ||** **ಭಕ್ತಸ್ಥಳ ೬೩೫.**

**ವಿವರಣೆ**—ಅನೇಕರು ಒಬ್ಬ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ಮಾತ್ರದಿಂದಲೇ ಬಂಧುಗಳೆಂತಲೂ ಒಂದೇ ಮನೆಯಲ್ಲಿ ವಾಸವಾಗಿರುವುದರಿಂದಲೇ ಕುಟುಂಬದವರೆಂದೂ ತಿಳಿಯುವುದು ವಿಹಿತವೇ? ಹಾಗಾದರೆ ದೇಹದಲ್ಲಿ ಹುಟ್ಟುವ ಹೇನು ಕೂರಿಗಳೂ ಬಂಧುಗಳಾಗಬೇಕಾದೀತು. ಮನೆಯಲ್ಲಿ ವಾಸವಾಗಿರುವ ಇಲಿ-ಹೆಗ್ಗಣಗಳೂ ಕುಟುಂಬಕ್ಕೆ ಸೇರಿದವುಗಳಾಗಬೇಕಾದೀತು. ಒಂದೇ

ವಿಧವಾದ ವಿಚಾರ-ಗುಣ-ಸ್ವಭಾವವುಳ್ಳವರೇ ನಿಜವಾದ ಸಹೋದರರೂ, ಕುಟುಂಬದವರೂ ಆಗಿದ್ದಾರೆ, ಆದಕಾರಣ ಯಾರು ಶಿವಭಕ್ತಿಯುಳ್ಳವರಾಗಿದ್ದಾರೆಯೋ, ಅವರು ಯಾವ ಕುಲ ಕಸಬುಗಳಿಗೆ ಸೇರಿದವರಾಗಿದ್ದರೂ ಅವರೆಲ್ಲರೂ ಸಹೋದರರೆಂದೇ ತಿಳಿದು ಅವರ ಹಿತಾರ್ಥವಾಗಿ ಪ್ರಯತ್ನಿಸಬೇಕೆಂದು ಈ ವಚನದಲ್ಲಿ ಪ್ರತಿಪಾದಿಸಲ್ಪಟ್ಟಿದೆ.

"ಯಾರಾದರೂ ಅನ್ನವನ್ನು ಚೆಲ್ಲಿದರೆ ಅದನ್ನು ನೋಡಿದ ಕಾಗೆಯು ಕಾ ಕಾ ಎಂದು ಕರೆದು ತನ್ನ ಬಳಗವನ್ನೆಲ್ಲಾ ಕೂಡಿಸುವುದಿಲ್ಲವೇ? ಕೋಳಿಯು ಆಹಾರವನ್ನು ಕಂಡೊಡನೆ ಕೂ-ಕೂ ಎಂದು ಕೂಗಿ ತನ್ನ ಕುಲದವುಗಳನ್ನೆಲ್ಲ ಕೂಡಿಸುವುದಿಲ್ಲವೇ? ಅಜ್ಞ ಪ್ರಾಣಿಗಳೇ ಈ ಪ್ರಕಾರ ತಮ್ಮ ಸ್ವಜಾತಿಯ ಸಂರಕ್ಷಣೆಗೂ, ಅಭಿವೃದ್ಧಿಗೂ ಅಭಿಮಾನದಿಂದ ಸಹಾಯ ಮಾಡುತ್ತಿರುವಾಗ ಶಿವಭಕ್ತರೆಂದು ಹೇಳಿಕೊಳ್ಳುವವರು ಆ ಶಿವಭಕ್ತಿಯು ಯಾರಲ್ಲಿದೆಯೋ ಅವರೆಲ್ಲರೂ ಯಾವ ಕುಲ ಕಸಬುಗಳುಳ್ಳವರಾಗಿದ್ದರೂ ತಮ್ಮ ಪಕ್ಷದವರೇ ಎಂದು ತಿಳಿದು, ಅವರ ಹಿತಾರ್ಥವಾಗಿ ಪ್ರಯತ್ನಿಸದಿದ್ದರೆ ಆ ಕಾಗೆ-ಕೋಳಿಗಳಿಗಿಂತ ಇವರು ಕನಿಷ್ಠರೆಂದು ತಿಳಿಯಬೇಕು."

(೫೫) **ಎನಗೆ ನಿಮ್ಮ ನೆನೆದಾಗಲೆ ಉದಯ| ಎನಗೆ ನಿಮ್ಮ ಮರೆದಾಗಲೆ ಅಸ್ತಮಾನ| ಎನಗೆ ನಿಮ್ಮ ನೆನಹೆ ಜೀವ| ಎನಗೆ ನಿಮ್ಮ ನೆನಹೆ ಪ್ರಾಣ ತಂದೆ| ಎನ್ನ ಹೃದಯದಲ್ಲಿ ನಿಮ್ಮ ಚರಣದುಂಡಿಗೆಯನೊತ್ತಯ್ಯ| ವದನದಲ್ಲಿ ಷಡಕ್ಷರಿಯ ಬರೆಯಯ್ಯ ಕೂಡಲ ಸಂಗಮದೇವ||** ಭಕ್ತಸ್ಥಳ ೪೯೬.

**ವಿವರಣೆ**—ಪರಮಾತ್ಮನ ಧ್ಯಾನವು ಮನಸ್ಸಿನ ಮಲಿನತ್ವವನ್ನು ತೆಗೆಯಲು ಮುಖ್ಯ ಸಾಧನವಾಗಿರುವುದರಿಂದ ಈ ವಚನದಲ್ಲಿ ಧ್ಯಾನದ ಅವಶ್ಯಕತೆಯನ್ನು ವಿವರಿಸಿದ್ದಾರೆ. ಕಪಿಲ ಋಷಿಗಳು ತಮ್ಮ ಸಾಂಖ್ಯ ದರ್ಶನದಲ್ಲಿ "ಧ್ಯಾನಂ ನಿರ್ವಿಷಯಂಮನಃ" ಎಂದು ಹೇಳಿದ್ದಾರಷ್ಟೆ.

"ಲಿಂಗದೇವನೇ, ನಿನ್ನನ್ನು ಸ್ಮರಿಸಿದಾಗಲೇ ನನಗೆ ಜ್ಞಾನೋದಯವಾಗುತ್ತದೆ. ನಿನ್ನನ್ನು ಮರೆತಾಗಲೇ ಅಜ್ಞಾನವು ನನ್ನನ್ನು ಆವರಿಸಿಕೊಳ್ಳುತ್ತದೆ. ಆದಕಾರಣ ನಿನ್ನ ಅರಿವೇ ಉದಯ; ನಿನ್ನ ಮರವೆಯೇ ಅಸ್ತಮಾನ. ನಿಮ್ಮನ್ನು ಧ್ಯಾನಮಾಡುವುದೇ ನಾನು ಜೀವದಿಂದಿದ್ದುದಕ್ಕೆ ದೃಷ್ಟಾಂತವು. ಯಾವಾಗ ನಿಮ್ಮ ಧ್ಯಾನವನ್ನು ಬಿಟ್ಟೆನೋ, ಆಗ ಮರಣವೇ ಸಂಭವಿಸುತ್ತದೆ. ಆದಕಾರಣ

ಪರಮಾತ್ಮನೇ, ನಿನ್ನ ಪಾದಗಳ ಮುದ್ರೆಯು ನನ್ನ ಹೃದಯದಲ್ಲಿ ನೆಲೆಗೊಳ್ಳುವಂತೆ ಮಾಡು. ಷಡಕ್ಷರಿಯ ಮಂತ್ರವನ್ನು ನನ್ನ ನಾಲಿಗೆಯಲ್ಲಿಯು ಯಾವಾಗಲೂ ಉಚ್ಚರಿಸುವಂತೆ ಮಾಡು."

**(೫೬) ವಚನದಲ್ಲಿ ನಿಮ್ಮ ನಾಮಾಮೃತ ತುಂಬಿ| ನಯನದಲ್ಲಿ ನಿಮ್ಮ ಮೂರುತಿ ತುಂಬಿ| ಮನದಲ್ಲಿ ನಿಮ್ಮ ನೆನಹು ತುಂಬಿ| ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ| ಕೂಡಲಸಂಗಮದೇವ ನಿಮ್ಮ ಚರಣಕಮಲದೊಳಗಾನು ತುಂಬಿ||** ಭಕ್ತ ಸ್ಥಳ ೪೯೦.

**ವಿವರಣೆ**— ಪರಮಾತ್ಮನಲ್ಲಿಯೇ ಜೀವಾತ್ಮನು ಲೀನವಾಗಬೇಕಾದರೆ ನೇತ್ರ ಮೊದಲಾದ ಇಂದ್ರಿಯಗಳೂ, ಮನಸ್ಸು ಮೊದಲಾದ ಕರಣಗಳೂ ಹೇಗೆ ಪ್ರವರ್ತಿಸಬೇಕೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ನಾಲಿಗೆಯಿಂದ ಬೇರೆ ಯಾವ ಶಬ್ದಗಳನ್ನೂ ನುಡಿಯದೆ ಲಿಂಗದೇವನ ನಾಮವೆಂಬ ಅಮೃತವನ್ನೇ ಸೇವಿಸುತ್ತಿದ್ದರೆ, ಕಣ್ಣಿನಿಂದ ಬೇರೆ ಯಾವ ಪದಾರ್ಥಗಳನ್ನೂ ನೋಡದೆ ಎಲ್ಲೆಲ್ಲಿಯೂ ಲಿಂಗ ಮೂರ್ತಿಯನ್ನೇ ನೋಡಿದರೆ, ಮನಸ್ಸಿನಲ್ಲಿ ಹೊನ್ನು, ಹೆಣ್ಣು, ಮಣ್ಣು ಮೊದಲಾದ ಯಾವ ವಿಷಯಗಳನ್ನೂ ಚಿಂತಿಸದೆ ಲಿಂಗದೇವನನ್ನೇ ಧ್ಯಾನಿಸುತ್ತಿದ್ದರೆ, ಮತ್ತು ಕಿವಿಯಿಂದ ಬೇರೆ ಯಾವ ಶಬ್ದಗಳನ್ನೂ ಕೇಳದೆ ಲಿಂಗದೇವನ ಮಹಿಮೆಗಳನ್ನೇ ಕೇಳುತ್ತಲಿದ್ದರೆ ಪರಮಾತ್ಮನ ಚರಣಕಮಲದಲ್ಲಿ ನಾನು ಭ್ರಮರನಾಗಿರುವೆನು.

**(೫೭) ಬ್ರಹ್ಮ ಪದವಿಯನೊಲ್ಲೆ| ವಿಷ್ಣು ಪದವಿಯನೊಲ್ಲೆ| ರುದ್ರಪದವಿಯನೊಲ್ಲೆ| ನಾನು ಮತ್ತಾವ ಪದವಿಯನೊಲ್ಲೆನಯ್ಯ| ಕೂಡಲ ಸಂಗಮದೇವ ನಿಮ್ಮ ಸದ್ಭಕ್ತರ ಪಾದವನರಿದಿಪ್ಪ ಮಹಾ ಪದವಿಯ ಕರುಣಿಸಯ್ಯ||** ಭಕ್ತಸ್ಥಳ ೩೫೯.

**ವಿವರಣೆ**—ಪರಮಾತ್ಮನಲ್ಲಿ ಅಸಾಧಾರಣವಾದ ಭಕ್ತಿಯುಳ್ಳ ಭಗವದ್ಭಕ್ತರ ಸೇವೆಯು ಬ್ರಹ್ಮಾದಿ ಪದವಿಗಳಿಗಿಂತ ಶ್ರೇಷ್ಠತರವಾದುದಾಗಿರುವುದರಿಂದ ಅಂಥ ಶಿವಶರಣರಸೇವೆಯಲ್ಲಿರತಕ್ಕದ್ದನ್ನೇ ಈ ವಚನದಲ್ಲಿ ಪ್ರಾರ್ಥಿಸಿಕೊಂಡಿದ್ದಾರೆ.

"ಲಿಂಗದೇವನೇ ನೀನು ನನ್ನ ಮೇಲೆ ಕೃಪೆ ಮಾಡಿದರೆ ನನಗೆ ಬ್ರಹ್ಮ, ವಿಷ್ಣು, ರುದ್ರಾದಿ ದೇವತೆಗಳಲ್ಲಿ ವಾಸವಾಗಿರುವಂಥ ಪದವಿಗಳನ್ನೇನೂ ಕೊಡಬೇಡ. ಯಾವಾಗಲೂ ನಿನ್ನ ಧ್ಯಾನದಲ್ಲಿಯೇ ಇರತಕ್ಕ ಸದ್ಭಕ್ತರ ಸೇವೆ ಮಾಡಿಕೊಂಡಿರುವುದನ್ನೇ ನನಗೆ ಕರುಣಿಸು."

(೫೮) **ದೇವಲೋಕ ಮರ್ತ್ಯಲೋಕವೆಂಬುದು ಮತ್ತೆ ಬೇರುಂಟೇ? ಈ ಲೋಕದೊಳಗೆ ಮತ್ತೆ ಅನಂತ ಲೋಕ| ಶಿವಲೋಕವೇ ಶಿವಾಚಾರವಯ್ಯ| ಶಿವಭಕ್ತನಿದ್ದ ಠಾವೇ ದೇವಲೋಕ! ಅಂತಪ್ಪ ಭಕ್ತನ ಅಂಗಳವೇ ವಾರಣಾಸಿ ಶಿವನಾಣೆ| ಕಾಯುವೇ ಕೈಲಾಸ! ಇದು ಸತ್ಯ ಕೂಡಲಸಂಗಮದೇವ||** ಭಕ್ತಸ್ಥಳ ೧೩೯.

**ವಿವರಣೆ**— ಯಾರು ಪರಮಾತ್ಮನಲ್ಲಿ ಭಕ್ತಿಯುಳ್ಳವರಾಗಿ ಸದ್ಗುಣ ಸದಾಚಾರಗಳಿಂದ ವರ್ತಿಸುತ್ತಾರೆಯೋ ಆ ಮಹಾತ್ಮರು ಸಕಲರಿಗೂ ಪೂಜ್ಯರಾಗುತ್ತಿದ್ದಾರಷ್ಟೆ. ಇಂಥ ಪೂಜ್ಯರಿರುವ ಸ್ಥಾನವೇ ಪವಿತ್ರ ಕ್ಷೇತ್ರವಾಗುತ್ತದೆ. ಅದೇ ದೇವ ಲೋಕವು. ಏಕೆಂದರೆ, ಅಲ್ಲಿಯೇ ಮನುಷ್ಯನಿಗೆ ಮಾನಸಿಕ ತಾಪಗಳು ನಿವಾರಣೆಯಾಗಿ ಸುಖಶಾಂತಿಗಳು ಲಭಿಸುತ್ತವೆ. ಈಗ ಪುಣ್ಯ ಕ್ಷೇತ್ರಗಳೆಂದು ತಿಳಿಯಲ್ಪಡುತ್ತಿರುವ ಕಾಶಿ ಮೊದಲಾದ ಸ್ಥಳಗಳಲ್ಲಿ ಅಂಥ ಮಹಾತ್ಮರು ಇದ್ದರೆಂದೇ ಅವು ಪುಣ್ಯಕ್ಷೇತ್ರಗಳಾಗಿದ್ದವೇ ವಿನಾ ಅಲ್ಲಿಯ ಕಲ್ಲು, ಮಣ್ಣು ಮೊದಲಾದ ಪದಾರ್ಥಗಳಿಂದೇನೂ ಅವು ಪವಿತ್ರ ಸ್ಥಾನಗಳಾಗಿರಲಿಲ್ಲ ಆದಕಾರಣ ಭಗವದ್ಭಕ್ತರಿರತಕ್ಕ ಸ್ಥಾನವೇ ಸರ್ವಶ್ರೇಷ್ಠವಾದುದೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ದೇವತೆಗಳು ಮತ್ತು ಮನುಷ್ಯರು ಇರತಕ್ಕ ಲೋಕಗಳು ಬೇರೆಯೆಂದು ತಿಳಿಯಬಾರದು. ಈ ಲೋಕದಲ್ಲಿಯೇ ನಾನಾ ಲೋಕಗಳಿವೆ ಶಿವಾಚಾರದಲ್ಲಿರುವವನಿಗೆ ಈ ಲೋಕವೇ ಶಿವಲೋಕವಾಗುವುದು. ಶಿವಭಕ್ತನು ವಾಸವಾಗಿರುವ ಸ್ಥಾನವೇ ದೇವಲೋಕವು. ದುರಾಚಾರಗಳಲ್ಲಿರುವ ಪಾಪಿಯು ವಾಸವಾಗಿರುವ ಸ್ಥಾನವು ನರಕವೇ ಸರಿ. ಈ ಪ್ರಕಾರ ಅವರವರ ಆಚರಣೆಯಂತೆ ಅವರವರಿಗೆ ಈ ಲೋಕವೇ ಬೇರೆಬೇರೆ ರೂಪವಾಗಿ ಪರಿಣಮಿಸುತ್ತದೆ ಶಿವಭಕ್ತನು ವಾಸವಾಗಿರುವ ಸ್ಥಾನದ ಮುಂಭಾಗವೇ ಕಾಶೀ ಕ್ಷೇತ್ರವು. ಏಕೆಂದರೆ ಆ ಮಹಾನುಭಾವನ ಸದುಪದೇಶಗಳನ್ನು ಕೇಳಲು ಆತನ ಮುಂಭಾಗದಲ್ಲಿ ಅನೇಕ ಸದ್ಗುಣಿಗಳು ಕುಳಿತುಕೊಳ್ಳುತ್ತಾರೆ ಎಂದಮೇಲೆ ಅದು ಕಾಶಿಯಂತೆ ಪವಿತ್ರ ಸ್ಥಾನವಾಗಲಿಲ್ಲವೇ? ಯಾವ ಮಹಾತ್ಮನು ಈ ಪ್ರಕಾರ ಲೋಕ ಹಿತಾರ್ಥವಾಗಿ ಜೀವಿಸಿರುತ್ತಾನೆಯೋ, ಆತನ ದೇಹವೇ ಶಿವನಿರತಕ್ಕ ಕೈಲಾಸವು ಇದು ಲೇಶಾಂಶವಾದರೂ ಅಸತ್ಯವೆಂದು ಭಾವಿಸಬಾರದು."

(೫೯) **ನಾದಪ್ರಿಯ ಶಿವನೆಂಬರು ನಾದಪ್ರಿಯ ಶಿವನಲ್ಲವಯ್ಯ| ವೇದಪ್ರಿಯ ಶಿವನೆಂಬರು ವೇದಪ್ರಿಯ ಶಿವನಲ್ಲವಯ್ಯ| ನಾದವ ಮಾಡಿದ**

**ರಾವಣಂಗೆ ಅರೆಯಾಯುಷ್ಯವಾಯಿತು| ವೇದವನೋದಿದ ಬ್ರಹ್ಮನ ಶಿರ ಹೋಯಿತು| ನಾದಪ್ರಿಯನೂ ಅಲ್ಲ| ವೇದ ಪ್ರಿಯನೂ ಅಲ್ಲ| ಭಕ್ತಿ ಪ್ರಿಯ ನಮ್ಮ ಕೂಡಲ ಸಂಗಮದೇವ||** ಭಕ್ತ ಸ್ಥಳ ೧೮೧.

**ವಿವರಣೆ**—ಮನುಷ್ಯನಿಗೆ ತನ್ನ ಪ್ರಾಣವೇ ಅತ್ಯಂತ ಪ್ರಿಯವಾದುದಾಗಿದೆಯಷ್ಟೆ. ಅಂಥ ಪ್ರಾಣವನ್ನು ಕೂಡಾ ಧರ್ಮಕಾರ್ಯಕ್ಕಾಗಿಯೂ, ಪರಮಾತ್ಮನ ಪ್ರೀತಿಗಾಗಿಯೂ, ಸಮರ್ಪಿಸುವದೇ ಶ್ರೇಷ್ಠವಾದ ಭಕ್ತಿಯಾಗಿದೆ. ಈ ವಿಶ್ವವು ಪರಮಾತ್ಮನ ದೃಶ್ಯ ಸ್ವರೂಪವಾಗಿರುವುದರಿಂದ ಲೋಕಸೇವೆಗೆ ಪ್ರಾಣವನ್ನು ಸಮರ್ಪಿಸುವುದೂ ಭಕ್ತಿಯ ಮುಖ್ಯ ಲಕ್ಷಣವಾಗಿದೆ. ಆದಕಾರಣ ಇಂಥ ನಿಜವಾದ ಭಕ್ತಿಗೆ ಪರಮಾತ್ಮನು ಮೆಚ್ಚುತ್ತಾನೆಯೇ ವಿನಾ, ಈ ಭಕ್ತಿಯಿಲ್ಲದ ನಿಸ್ಸಾರವಾದ ಗಾನಕ್ಕಾಗಲಿ ಅಥವಾ ವೇದ ಶಾಸ್ತ್ರಾದಿಗಳ ಪಾಂಡಿತ್ಯಕ್ಕಾಗಲಿ ಪರಮಾತ್ಮನು ಒಲಿಯುವುದಿಲ್ಲವೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ. ಬ್ರಹ್ಮಗೀತೆಯಲ್ಲಿಯು ಕೂಡ ಇದೇ ಪ್ರಕಾರ ಹೇಳಿದೆ "ನಕರ್ಮಣಾ ನತಪಸಾ ನ ಜಪೈರ್ನಸಮಾಧಿಭಿಃ| ನ ಜ್ಞಾನೇನ ನ ದಾನೇನ ವಶ್ಯೋಽಹಂ ಶ್ರದ್ಧಯಾ ವಿನಾ."

"ಶಿವನು ಗಾನಲೋಲನಾಗಿರುವುದರಿಂದ ಸಂಗೀತಕ್ಕೆ ಮೆಚ್ಚುತ್ತಾನೆಂದು ಹೇಳುವುದು ನಿಜವಲ್ಲ. ಹಾಗಾಗಿದ್ದರೆ ರಾವಣನ ದಿವ್ಯವಾದ ಸಂಗೀತಕ್ಕೆ ಶಿವನು ಮೆಚ್ಚಿ, ಆವನು ಚಿರಂಜೀವಿಯಾಗುವಂತೆ ಏಕೆ ಕರುಣಿಸಬಾರದಾಗಿದ್ದಿತು? ವೇದವೇದಾಂತಗಳನ್ನು ಓದಿ ಜ್ಞಾನನಿಧಿಯಾದವರಿಗೆ ಶಿವನು ಒಲಿಯುತ್ತಾನೆಂಬುದೂ ಸುಳ್ಳು. ಏಕೆಂದರೆ, ಬ್ರಹ್ಮನು ಮಹಾಜ್ಞಾನಿಯಷ್ಟೆ. ಆತನೇಕೆ ತನ್ನ ಶಿರಸ್ಸನ್ನು ಶಿವನಿಂದ ಪಡೆದುಕೊಳ್ಳಲು ಸಮರ್ಥನಾಗಲಿಲ್ಲ? ಆದಕಾರಣ ಶಿವನು ನಾದಕ್ಕೂ, ವೇದಕ್ಕೂ ಮೆಚ್ಚುವವನಲ್ಲ, ಆತನು ದೃಢತರವಾದ ಭಕ್ತಿಗೇನೇ ಮೆಚ್ಚುತ್ತಾನೆ"

(೬೦) **ತನ್ನಾಶ್ರಯದ ರತಿಸುಖವನು | ತಾನುಂಬ ಊಟವನು| ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ? ತನ್ನ ಲಿಂಗಕ್ಕೆ ಮಾಡುವ ನಿತ್ಯ ನೇಮವನು ತಾ ಮಾಡಬೇಕಲ್ಲದೆ ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ? ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ ನಿಮ್ಮನೆತ್ತಬಲ್ಲರು ಕೂಡಲಸಂಗಮದೇವ?||** ಭಕ್ತ ಸ್ಥಳ ೧೮೩.

**ವಿವರಣೆ**—ಆಳು ಮೊದಲುಗೊಂಡು ಆರಸಿನವರೆಗಿನ ಸಕಲರೂ ತಮಗೆ ಬಂದ ನಿದ್ರೆಯನ್ನು ಅನುಭವಿಸುವುದಕ್ಕಾಗಲೀ, ಅಥವಾ ತಮಗೆ ಬಂದ ರೋಗವನ್ನು ನಿವಾರಣೆ ಮಾಡಿಕೊಳ್ಳುವುದಕ್ಕಾಗಲೀ, ತಾವೇ ಪ್ರಯತ್ನಿಸಬೇಕೇ ವಿನಾ

ಅನ್ಯರು ನಿದ್ರೆಮಾಡಿದರಾಗಲಿ, ಅಥವಾ ಔಷಧಿಯನ್ನು ತೆಗೆದುಕೊಂಡರಾಗಲೀ, ತಮಗೆ ಸಮಾಧಾನ, ಆರೋಗ್ಯಗಳು ಹೇಗೆ ದೊರೆಯುವದಿಲ್ಲವೋ, ಹಾಗೆಯೇ ನಮ್ಮ ಆತ್ಮೋನ್ನತಿಯಾಗಬೇಕಾದರೆ ಜನಸೇವೆ, ಜಪ, ತಪ, ಧ್ಯಾನ, ಪೂಜಾದಿ ಸತ್ಕಾರ್ಯಗಳನ್ನು ನಾವೇ ಆಚರಿಸಬೇಕೇ ವಿನಾ ಅನ್ಯರಿಂದ ಮಾಡಿಸಿದರೆ ನಮ್ಮ ಆತ್ಮೋನ್ನತಿಯಾಗುವದಿಲ್ಲ ಆದಕಾರಣ ಅನ್ಯರಿಂದ ದೇವರ ಪೂಜೆಯನ್ನು ಮಾಡಿಸಿ, ಆ ಫಲವನ್ನು ತಾವು ಹೊಂದುತ್ತೇವೆಂದು ತಿಳಿದುಕೊಂಡಿರುವ ಮೂಢತ್ವವನ್ನು ಈ ವಚನದಲ್ಲಿ ನಿಷೇಧಿಸಿದ್ದಾರೆ.

"ತನಗೆ ವಿಷಯಾಪೇಕ್ಷೆಯಾಗಿದ್ದರೆ ಅಥವಾ ಹಸಿವೆಯಾಗಿದ್ದರೆ ವಿಷಯೋಪಭೋಗವನ್ನು ಅಥವಾ ಊಟವನ್ನು ತಾನೇ ಮಾಡಬೇಕಲ್ಲದೆ ಇವುಗಳನ್ನು ಅನ್ಯರು ಮಾಡಿದರೆ ಹೇಗೆ ತನಗೆ ತೃಪ್ತಿಯಾಗುವದಿಲ್ಲವೋ, ಹಾಗೆಯೇ ತನ್ನ ಲಿಂಗಪೂಜೆಯನ್ನು ತಾನೇ ಮಾಡಿದರೆ ತನ್ನ ಮನಸ್ಸಿನ ದೋಷಗಳಳಿವವೇ ಹೊರತು, ಅನ್ಯರು ಪೂಜೆ ಮಾಡಿದರೆ ಅದರಿಂದ ನಮ್ಮ ಮನಸ್ಸು ಪವಿತ್ರವಾಗುವದಿಲ್ಲ, ಆ ಪ್ರಕಾರ ಪೂಜೆ ಮಾಡಿಸುತ್ತಿರುವವರು ನಮ್ಮಾಸೆ ಉಪಚಾರಕ್ಕಾಗಿ ಪೂಜೆಯನ್ನು ಮಾಡಿಸುತ್ತಿದ್ದಾರೆಯೇ ವಿನಾ ಅದರಿಂದ ಅವರು ಪರಶಿವನನ್ನೇನೂ ಕಾಣುವದಿಲ್ಲ"

(೬೧) **ತನುಮನಧನವ ಹಿಂದಿಕ್ಕಿಕೊಂಡು! ಮಾತಿನ ಬಣಬೆಯ ಒಳಲೊಟ್ಟೆಯ ನುಡಿವರು ನೀವೆಲ್ಲರು ಕೇಳಿರೆ। ತಲೆಯಿಲ್ಲದ ಕೋಲು ಪೊಳ್ಳು ಹಾರುವುದಲ್ಲದೆ ಗುರಿಯ ತಾಗ ಬಲ್ಲುದೆ? ಮಾಯಾಪಾಶ ಹಿಂಗಿ ಮನವಗಂಟು ಬಿಡದನ್ನಕ್ಕ ಕೂಡಲ ಸಂಗಮದೇವನೆಂತೊಲಿವನಯ್ಯ?॥**

ಭಕ್ತಸ್ಥಳ ೨೦೩.

**ವಿವರಣೆ**—ಪುಣ್ಯ ಕಾರ್ಯಗಳಿಗೆ ತಮ್ಮ ತನು, ಮನ, ಧನಗಳನ್ನು ಸ್ವಲ್ಪವಾದರೂ ಕೊಡದೆ ಕೇವಲ ಬಣಮಾತಿನಿಂದಲೇ ಜನರನ್ನು ಮರುಳುಗೊಳಿಸಿ ತಾವು ಬುದ್ಧಿವಂತರೂ, ಭಕ್ತಿಪರರೂ, ಉದಾರಿಗಳೂ ಎಂದು ಹೇಳಿಸಿಕೊಳ್ಳಲು ಪ್ರಯತ್ನಿಸುವವರು ಪರಮಾತ್ಮನ ಪ್ರೀತಿಗೆ ಪಾತ್ರರಾಗುವುದಿಲ್ಲವೆಂಬುದನ್ನು ಈ ವಚನದಲ್ಲಿ ಸ್ಪಷ್ಟವಾಗಿ ವಿವರಿಸಿದ್ದಾರೆ

"ಗುರು ಕಾರ್ಯಕ್ಕೆ ದೇಹವನ್ನು ಸ್ವಲ್ಪವಾದರೂ ದಣಿಸದೆ, ಲಿಂಗ ಪೂಜೆಯಲ್ಲಿ ಮನಸ್ಸನ್ನು ಕಿಂಚಿತ್ತಾದರೂ ಇಡದೆ, ಜ್ಞಾನಮೂರ್ತಿಯಾದ ಜಂಗಮದ ಇಷ್ಟವನ್ನು ನೆರವೇರಿಸಲು ಒಂದು ಕವಡೆಯನ್ನಾದರೂ ಕೊಡದೆ 'ಬುದ್ಧೀ,

ಸ್ವಾಮಿ, ಶರಣರೇ, ಶಿವನೇ, ಎಂದು ಕೇವಲ ಬಣಮಾತಿನಲ್ಲಿಯೇ ಭಕ್ತಿಯನ್ನು ತೋರಿಸುವವರಿಗೆ ಲಿಂಗದೇವನು ಮೆಚ್ಚುವುದಿಲ್ಲ. ಮುಂದೆ ಚೆಂಡಾಗಿಲ್ಲದ ಬಾಣವನ್ನು ಎಸೆದರೆ ಹಾರಿ ಹೋಗುವುದಲ್ಲದೆ ಗುರಿಯಿಟ್ಟ ಸ್ಥಳಕ್ಕೆ ಹೇಗೆ ಹೋಗಿ ಮುಟ್ಟುವುದಿಲ್ಲವೋ, ಹಾಗೆಯೇ ಇಂಥ ಪೊಳ್ಳುಮಾತುಗಳಿಂದಲೇ ಭಕ್ತರಾಗ ಬೇಕೆಂಬುವವರು ಲಿಂಗದೇವನನ್ನು ಸೇರುವುದಿಲ್ಲ. ತನು-ಮನ-ಧನಗಳಲ್ಲಿ ಸುತ್ತಿ ಕೊಂಡಿರುವ ಮೋಹ ಪಾಶವು ಹರಿದು, ಇವುಗಳನ್ನು ಗುರು ಲಿಂಗ ಜಂಗಮಗಳಿಗೆ ಸೂರೆ ಮಾಡಿದ ವಿನಾ ಲಿಂಗದೇವನೊಲಿಯುವುದಿಲ್ಲ."

**(೬೨) ಹಲವು ಮಣಿಯ ಕಟ್ಟಿ ಕುಣಿಕುಣಿದಾಡಿ | ಹಲವು ಪರಿಯಲಿ ವಿಭೂತಿಯ ಪೂಸಿ ಗಣಾಡಂಬರದ ನಡುವೆ ನಲಿನಲಿದಾಡಿ | ಉಂಡು ತಾಂಬೂಲಗೊಂಡು ಹೋಹುದಲ್ಲ| ತನುಮನಧನ ಸಮರ್ಪಿಸ ದವರ ಕೂಡಲ ಸಂಗಮದೇವರೆಂತೊಲಿವನಯ್ಯ?** ಭಕ್ತಸ್ಥಳ ೨೦೫.

**ವಿವರಣೆ—** ವಿಭೂತಿ, ರುದ್ರಾಕ್ಷಿ ಮೊದಲಾದ ಶಿವಲಾಂಛನಗಳನ್ನು ಯಥೇಚ್ಛವಾಗಿ ಹಾಕಿಕೊಂಡ ಬಾಹ್ಯಾಡಂಬರದ ವೇಷಕ್ಕಾಗಲಿ ಅಥವಾ ಗಾನ-ನೃತ್ಯಗಳಿಗಾಗಲಿ ಪರಮಾತ್ಮನು ಮೆಚ್ಚುವುದಿಲ್ಲ. ಪರಹಿತಾರ್ಥವಾಗಿ ಸ್ವಾರ್ಥ ವನ್ನು ಸೂರೆಮಾಡಿದಾಗಲೇ ಶಿವನು ಒಲಿಯುತ್ತಾನೆ.

ಈ ದೇಹ, ಮನಸ್ಸು ಮತ್ತು ಜೀವಾತ್ಮ ಇವು ಮೂರರಿಂದಲೇ ನಮ್ಮ ಅಸ್ತಿತ್ವವಷ್ಟೆ. ಇವು ಮೂರನ್ನೂ ವೀರಶೈವ ಮತ ಸಿದ್ಧಾಂತದಂತೆ ತಾನು ಗುರು ಲಿಂಗ ಜಂಗಮಗಳಲ್ಲಿ ದಾಸ ಭಾವವನ್ನು ವಹಿಸಿ, ಅವುಗಳಿಗೆ ತನ್ನ ತನು, ಮನ, ಧನಗಳನ್ನು ತ್ಯಾಗ ಮಾಡಿದ ನಂತರ ಎಂದರೆ ದೇಹಾಭಿಮಾನ (ನಾನು) ವನ್ನು ಗುರುವಿನಿಂದ, ಮನಸ್ಸಿನ ಚಾಂಚಲ್ಯ (ಮನ) ವನ್ನು ಲಿಂಗದೇವನಿಂದ, ಜೀವಾತ್ಮನ ಜೀವಭಾವ (ನನ್ನದು) ವನ್ನು ಜಂಗಮದಿಂದ ತ್ಯಾಗವಾಡಿದ ಮೇಲೆ, ಸೋಹಂಭಾವವು ನೆಲೆಗೊಳ್ಳುತ್ತದೆ. ಇದೇ ನಿಜವಾದ ದಾಸೋಹವು ಆದಕಾರಣ ತನು-ಮನ-ಧನಗಳನ್ನು ಪರಮಾತ್ಮನ ಮೂರು ರೂಪಗಳಾದ ಗುರು-ಲಿಂಗ ಜಂಗಮಗಳಿಗೆ ಸಮರ್ಪಿಸಿದಾಗಲೇ ಶಿವ ಸಾಕ್ಷಾತ್ಕಾರವು ಲಭಿಸುತ್ತದಲ್ಲದೆ ಅವು ಗಳನ್ನು ತ್ಯಾಗ ಮಾಡದೆ ಆಡಂಬರದ ಪೂಜಾ ನೃತ್ಯಾದಿಗಳಿಂದ ಆತ್ಮ ಸಾಕ್ಷಾ ತ್ಕಾರವು ಪ್ರಾಪ್ತವಾಗುವುದಿಲ್ಲವೆಂಬುದನ್ನೇ ಈ ವಚನದಲ್ಲಿ ವಿವರಿಸಿದ್ದಾರೆ. ಶ್ರುತಿಗಳಲ್ಲಿಯು ಕೂಡಾ "ನ ಧನೇನ ನ ಪ್ರಜಯಾ ತ್ಯಾಗೇನೈಕೇನಮೃತತ್ವ ಮಾನಶುः" ಎಂದು ತ್ಯಾಗದಿಂದಲೇ ಮೋಕ್ಷವಲ್ಲದೆ, ಧನ-ಪುತ್ರಾದಿಗಳಿಂದ ಮೋಕ್ಷಪ್ರಾಪ್ತಿಯಾಗುವುದಿಲ್ಲವೆಂದೇ ಹೇಳಿದೆ.

"ನಾನಾ ಮುಖಗಳ ರುದ್ರಾಕ್ಷಿಗಳನ್ನು ಸರಗಟ್ಟಲೆ ಹಾಕಿಕೊಂಡು, ವಿಭೂತಿಯನ್ನು ಮೈತುಂಬ ಅಂದಚಂದವಾಗಿ ಧರಿಸಿಕೊಂಡು, ಗಣಾರಾಧನೆಗಳಲ್ಲಿ ಅನೇಕ ರೀತಿಗಳಿಂದ ಹಾಡಿ ಕುಣಿದಾಡಿ, ಆ ಮೇಲೆ ಯಥೇಚ್ಛವಾಗಿ ಊಟ ಮಾಡಿ, ತಾಂಬೂಲವನ್ನು ಸೇವಿಸಿ ಹೋದ ಮಾತ್ರವಲ್ಲಿ ಭಕ್ತಿಪರನಾದಂತಾಗಲಿಲ್ಲ. ಈ ಪ್ರಕಾರ ಡಂಭದ ಆಚರಣೆಗಳನ್ನಾಚರಿಸಿದರೆ ಲಿಂಗದೇವನು ಮೆಚ್ಚುವುದಿಲ್ಲ. ತಮ್ಮ ತನು ಮನ-ಧನಗಳನ್ನು ಗುರು-ಲಿಂಗ-ಜಂಗಮುಗಳಿಗೆ ಸಮರ್ಪಿಸಿದಾಗಲೇ ಲಿಂಗದೇವನು ಒಲಿಯುವನು"

**(೬೩) ಓಡಲಾರದ ಮೃಗವು ಸೊಣಗಂಗೆ ಮಾಂಸವ ಕೊಡು ವಂತೆ ಮಾಡಲಾಗದು ಭಕ್ತನು| ಕೊಳಲಾಗದು ಜಂಗಮವು| ಹಿರಿಯರು ನರಮಾಂಸ ಭುಂಜಿಸುವರೆ? ತನುವುಕ್ಕಿ ಮಾಡಬೇಕು ಭಕ್ತ ವಂದಿಸಿ ಕೊಳಬೇಕು ಜಂಗಮ ಕೂಡಲ ಸಂಗಮದೇವ|| ಭಕ್ತಸ್ಥಳ ೨೪೯.**

**ವಿವರಣೆ—** ಗುರು-ಹಿರಿಯರ ದಾಕ್ಷಿಣ್ಯಕ್ಕಾಗಲಿ, ಅಥವಾ ಅವರ ಕೈಯಲ್ಲಿ ಶಿಲ್ಕಿ ಪೇಚಾಡಬೇಕಾಗುತ್ತದೆಂದಾಗಲಿ ಮನಸ್ಸಿಲ್ಲದೆ ಅನಿವಾರ್ಯದಿಂದ ಧನ-ಧಾನ್ಯಾದಿಗಳನ್ನು ದಾನಮಾಡಿದರೆ ಅದರಿಂದ ಆ ದಾನಮಾಡಿದಾತನಿಗೆ ಪುಣ್ಯ ಬರುವುದಿಲ್ಲ. ಆ ಪ್ರಕಾರ ಅಸಮಾಧಾನದಿಂದ ಕೊಟ್ಟ ದಾನವನ್ನು ತೆಗೆದುಕೊಂಡಾತನು ಆ ದಾನಕೊಟ್ಟವನನ್ನು ಹಿಂಸೆಗೊಳಿಸಿದಂತೆಯೇ ಸರಿ. ಆದಪ್ರಯುಕ್ತ ದಾನ ಮಾಡುವವರು ಮನಃಪೂರ್ವಕ ಸ್ವಸಂತೋಷದಿಂದಲೇ ಮಾಡಬೇಕು; ಮತ್ತು ಅಂಥ ದಾನವನ್ನೇ ಸ್ವೀಕರಿಸಬೇಕು. "ಬೇಡುವಾತ ಜಂಗಮವಲ್ಲ; ಬೇಡಿಸಿಕೊಂಬಾತ ಭಕ್ತನಲ್ಲ" ಎಂಬ ಪುರಾತನ ವಚನವಾದರೂ ಮೇಲಣ ಅಭಿಪ್ರಾಯವನ್ನೇ ಸೂಚಿಸತಕ್ಕದ್ದಾಗಿದೆ. ಇದನ್ನೇ ಈ ವಚನದಲ್ಲಿ ವಿವರಿಸಿದ್ದಾರೆ.

"ಬೇಟೆಯ ನಾಯಿಗಳು ಬೆನ್ನಟ್ಟಿ ಬರುವಾಗ ಓಡಲಿಕ್ಕಾಗದ ಒಂದು ಚಿಗರೆಯು ನಾಯಿಗಳಿಗೆ ಸಿಕ್ಕ ನಂತರ ತಾನು ಪರೋಪಕಾರಕ್ಕಾಗಿಯೇ ಈ ದೇಹ ವನ್ನು ನಾಯಿಗಳಿಗೆ ಕೊಡ ಬಯಸಿದೆನೆಂದು ಹೇಳಿದರೆ, ಅದು ಹೇಗೆ ಹಾಸ್ಯಾಸ್ಪದ ವಾದುದಾಗುತ್ತದೆಯೋ, ಹಾಗೆಯೇ ಯಾವುದೋ ಒಂದು ಪೇಚಿಗೆ ಸಿಕ್ಕಿಗ ಮನಸ್ಸಿಲ್ಲದೆ ಜಂಗಮಕ್ಕೆ ಮಾಡುತ್ತಿರುವ ದಾನವು ಡಾಂಭಿಕವಾದುದಾಗಿರುತ್ತದೆ. ಭಕ್ತನು ಆ ಪ್ರಕಾರ ದಾನಮಾಡಬಾರದು. ಜಂಗಮವು ಅಂಥ ದಾನವನ್ನು ಸ್ವೀಕರಿಸಬಾರದು. ಭಕ್ತರನ್ನು ಹಿಂಸೆಗೊಳಿಸಿ ತೆಗೆದುಕೊಂಡ ದಾನವು ನರ

ಮಾಂಸ ಸೇವನೆಯಷ್ಟು ನಿಂದ್ಯವಾದುದಾಗಿದೆ. ದಾನವನ್ನು ಭಕ್ತನು ಸ್ವಸಂತೋಷದಿಂದಲೇ ಮಾಡಬೇಕು. ಮತ್ತು ಜಂಗಮ ಮೂರ್ತಿಯು ಅಂಥಾ ದಾನವನ್ನೇ ಸ್ವೀಕರಿಸಬೇಕು."

**(೬೪) ಕಾಂಚನವೆಂಬ ನಾಯಿಯ ನೆಚ್ಚಿ ನಿಮ್ಮ ನಾನು ಮರೆದೆನಯ್ಯ?। ಕಾಂಚನಕ್ಕೆ ವೇಳೆಯಲ್ಲದೆ ಲಿಂಗಕ್ಕೆ ವೇಳೆಯೆಲ್ಲಿಹುದು? ಹಡಿಗೆ ಮೆಚ್ಚಿದ ಸೊಣಗನು ಅಮೃತದ ರುಚಿಯಬಲ್ಲುದೆ ಕೂಡಲ ಸಂಗಮದೇವ॥** ಭಕ್ತ ಸ್ಥಳ ೩೧೨.

**ವಿವರಣೆ—** ಮನುಷ್ಯನಿಗೆ ದ್ರವ್ಯವೇನೋ ಬೇಕೇಬೇಕು. ಆದರೆ ದ್ರವ್ಯಕ್ಕಾಗಿಯೇ ಮನುಷ್ಯನ ಅಸ್ತಿತ್ವವಿಲ್ಲ. ನಾವು ನಮ್ಮ ಆಯುಷ್ಯದಲ್ಲೆಲ್ಲಾ ದ್ರವ್ಯವನ್ನು ಗಳಿಸುವುದೊಂದೇ ಕಾರ್ಯವೆಂದು ತಿಳಿಯುವುದು ಯೋಗ್ಯವಲ್ಲ. ಅನ್ನ ಅರಿವೆಗಳಿಗಾಗಿ ನಮಗೆ ದ್ರವ್ಯವು ಅಗತ್ಯವಾಗಿ ಬೇಕಾಗಿದೆ ಅವುಗಳಿಗೆ ನಾವು ಪರರನ್ನು ಅವಲಂಬಿಸಬಾರದು. ನಾವು ಹೊಟ್ಟೆಬಟ್ಟೆಗಳಿಗೆ ಹಣವಿಲ್ಲದವರಾದರೆ ಹೇಗೆ ದು:ಖಗಳಾಗುತ್ತೇವೆಯೋ ಹಾಗೆಯೇ ನಮ್ಮ ಆಯುಷ್ಯವನ್ನೆಲ್ಲಾ ಹಣವನ್ನು ಗಳಿಸುವುದರಲ್ಲಿಯೇ ಕಳೆಯುವುದರಿಂದ ದುಃಖಿಗಳಾಗುತ್ತೇವೆ. ಹೊಟ್ಟೆಗಿಲ್ಲದಿದ್ದರೂ ಕಷ್ಟ; ಹೆಚ್ಚು ಊಟಮಾಡಿದರೂ ಕಷ್ಟಗಳು ಹೇಗೆ ಸಂಭವಿಸುತ್ತವೆಯೋ, ಹಾಗೆಯೇ ದ್ರವ್ಯವಿಲ್ಲದಿದ್ದರೂ ಕಷ್ಟ; ದ್ರವ್ಯ ಹೆಚ್ಚಾದರೂ ಕಷ್ಟ ಏಕೆಂದರೆ, ಹೆಚ್ಚಾದ ಹಣವು ವಿಷಯೋಪಭೋಗದ ಕಡೆಗೆ ವಿನಿಯೋಗವಾಗುವುದೇ ವಿಶೇಷವು. ಮತ್ತು ಅದು ಕೂಡುವಾಗ ಅನೇಕ ಅನ್ಯಾಯಗಳನ್ನು ಕೂಡಿಕೊಂಡೇ ಬರುವುದು. ಆದಕಾರಣ ನಮ್ಮ ಪ್ರಾಚೀನರು "ಅಂಬಲಿ ಕಂಬಳಿ ರಾಸ್ತು, ಮಿಕ್ಕದ್ದೆಲ್ಲಾ ಜಾಸ್ತು" ಎಂದು ಹೇಳಿದ್ದಾರೆ ಇದೇ ನಿಜವಾದ ಅರ್ಥಶಾಸ್ತ್ರದ ಸೂತ್ರವು. ದ್ರವ್ಯಾರ್ಜನೆಯ ಈ ಮರ್ಮವನ್ನರಿಯದೆ ಯಾವಾಗಲೂ ಹಣವನ್ನು ಗಳಿಸುವ ಕಾರ್ಯದಲ್ಲಿಯೇ ಮಗ್ನರಾಗಿ ನಾನಾ ಕಪಟೋಪಾಯಗಳಿಂದಲೂ, ಅನ್ಯಾಯಗಳಿಂದಲೂ ದ್ರವ್ಯವನ್ನು ಸಂಗ್ರಹಿಸುತ್ತ ಹಣವೇ ಪರದೈವವೆಂದು ನಂಬಿರುವ ಪಾಪಾತ್ಮರು ಪರತರವಾದ ಸುಖಶಾಂತಿಗಳನ್ನು ಹೊಂದುವುದಿಲ್ಲವೆಂಬಂಶವು ಈ ವಚನದಲ್ಲಿ ವಿವರಿಸಲ್ಪಟ್ಟಿದೆ.

"ದ್ರವ್ಯವೆಂಬ ನಾಯಿಯನ್ನು ಮೆಚ್ಚಿ ಅದರ ಬೆನ್ನು ಹತ್ತಿರುವುದರಿಂದ ಲಿಂಗದೇವನೇ, ನಿಮ್ಮನ್ನು ನಾನು ಮರೆತೆನು. ದ್ರವ್ಯವನ್ನು ಗಳಿಸುವುದರಲ್ಲಿಯೇ ನಾನು ಆಸಕ್ತನಾಗಿರುವುದರಿಂದ ಕಾಲವೆಲ್ಲವೂ ಅದಕ್ಕಾಗಿಯೇ ಕಳೆದು ಹೋಗು

ತ್ತಲಿದೆಯೇ ವಿನಾ ನಿಮ್ಮನ್ನು ಪೂಜಿಸಿ ಧ್ಯಾನಿಸಲು ನನಗೆ ಕಾಲವೇ ದೊರೆಯ ದಂತಾಗಿದೆ. ಒಣಗಿದ ಎಲುಬನ್ನು ಕಡಿಕಡಿದು ಅದನ್ನು ಮುಚ್ಚಿಟ್ಟುಕೊಳ್ಳುವು ದರಲ್ಲಿಯೇ ಮಗ್ನವಾಗಿರುವ ನಾಯಿಯು ಅಮೃತದ ರುಚಿಯನ್ನರಿಯದ ಕಾರಣ ಹೇಗೆ ಅದು ಅಮೃತವನ್ನು ಸೇವಿಸದೆ ಎಲುಬನ್ನೇ ಕಡಿಯುತ್ತಿರುತ್ತದೆಯೋ, ಹಾಗೆಯೇ ನಾನು ದ್ರವ್ಯ ಸಂಬಂಧವಾದ ವಿಷಯೋಪಭೋಗದಲ್ಲಿರುತ್ತಿದ್ದೇನೇ ಹೊರತು, ನಿಮ್ಮ ನಾಮಾಮೃತವ ಸೇವಿಸಿ ನಿತ್ಯ ಸುಖಿಯಾಗಲು ಪ್ರಯತ್ನಿ ಸುತ್ತಾ ಇಲ್ಲ."

(೬೫) **ಹಾವುತಿಂದವರ ನುಡಿಸಬಹುದು| ಗ್ರಹ ಹಿಡಿದವರ ನುಡಿಸಬಹುದು | ಸಿರಿಗರ ಹೊಡೆದವರ ನುಡಿಸಬಾರದು ನೋಡಯ್ಯ| ಬಡತನವೆಂಬ ಮಂತ್ರವಾದಿ ಹೋಗಲು ಒಡನೆ ನುಡಿವರಯ್ಯ ಕೂಡಲ ಸಂಗಮದೇವ||** ಭಕ್ತಸ್ಥಳ ೧೩೨.

**ವಿವರಣೆ**—ಯೌವನ ಮದದಲ್ಲಿ ಮುಂದಾಲೋಚನೆಯಿಲ್ಲದೆ ಇಂದ್ರಿಯ ಗಳ ವಶನಾಗಿ ಅನೇಕ ಪಾಪಾಚರಣೆಗಳನ್ನಾಚರಿಸುವಾತನು ಮುಪ್ಪಿನ ಕಾಲದಲ್ಲಿ ಹೇಗೆ ನಾನಾ ಯಾತನೆಗಳನ್ನನುಭವಿಸಬೇಕಾಗುತ್ತದೆಯೋ, ಹಾಗೆಯೇ ಧನ ಧಾನ್ಯಗಳು ಯಥೇಚ್ಛವಾಗಿದ್ದಾಗ ಆ ಧನಮದಕ್ಕೊಳಗಾಗಿ ದುರಾಚಾರಗಳಿಂದ ನಡೆಯುವವರು ದ್ರವ್ಯವು ಹೋದ ನಂತರ ಅನೇಕ ದುಃಖಗಳಿಂದ ಬಳಲಬೇಕಾ ಗುತ್ತದೆ. ಆದಕಾರಣ ಸಂಪತ್ತಿದ್ದಾಗ ವಿನಯಶೀಲನಾಗಿ ನಡೆದುಕೊಳ್ಳುವುದೇ ಹಿತಕರವಾದುದಾಗಿದೆ. ಆದರೆ ಧನವಿದ್ದಾಗ ಅಹಂಕಾರದಿಂದ ನಡೆದು, ಅದು ಹೋದ ನಂತರ ತಲೆಬಾಗಿ ನಡೆಯುವವರೇ ಲೋಕದಲ್ಲಿ ವಿಶೇಷವಾಗಿರುವುದ ರಿಂದ ಅಂಥವರನ್ನು ಕುರಿತು ಈ ವಚನದಲ್ಲಿ ವಿವರಿಸಿದ್ದಾರೆ.

"ಹಾವು ಕಡಿದವರಿಗೆ ಔಷಧಿಯನ್ನು ಕೊಟ್ಟು ವಿಷವನ್ನು ಇಳಿಸಿ ಅವರನ್ನು ಮಾತನಾಡಿಸಬಹುದು. ದೆವ್ವ ಹಿಡಿದು ಮಾತನಾಡದಿದ್ದವರನ್ನು ಮಂತ್ರಶಕ್ತಿಯಿಂದ ಮಾತನಾಡಿಸಬಹುದು. ಆದರೆ ಸಂಪತ್ತೆಂಬ ಪಿಶಾಚಿಯು ಯಾರನ್ನು ಹಿಡಿದುಕೊಳ್ಳುತ್ತದೆಯೋ ಅವರನ್ನು ಮಾತನಾಡಿಸುವುದು ಮಾತ್ರ ಬಹು ಕಷ್ಟ. ಬಡತನವೆಂಬ ಮಂತ್ರವಾದಿಯು ಹೋದನಂತರ ಕೂಡಲೇ ಮಾತನಾಡುವರು."

(೬೬) **ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲ ದಯ್ಯ | ನಾಯಿಯ ಹಾಲು ನಾಯಿಯ ಮರಿಗಲ್ಲದೆ ಪಂಚಾಮೃತಕ್ಕೆ**

**ಸಲ್ಲದಯ್ಯ| ನಮ್ಮ ಕೂಡಲ ಸಂಗನ ಶರಣಂಗಲ್ಲದೆ ಮಾಡುವುದರ್ಥ ವ್ಯರ್ಥ ಕಂಡಯ್ಯ||** ಭಕ್ತಸ್ಥಳ ೨೨೨.

**ವಿವರಣೆ**—ಪರೋಪಕಾರಾರ್ಥವಾಗಿಯೇ ಜೀವಿಸಿರುವ ಮಹಾತ್ಮರು ಲೋಕೋದ್ಧಾರದ ಅನೇಕ ಮಹತ್ಕಾರ್ಯಗಳನ್ನು ಮಾಡುತ್ತಿರುತ್ತಾರೆ. ಅಂಥ ಭಗವದ್ಭಕ್ತರಿಗೆ ದ್ರವ್ಯವನ್ನು ಸೂರೆ ಮಾಡಿದರೇನೇ, ಆ ದಾನವು ಸಾರ್ಥಕವಾಗುವುದು. ಪರಹಿತಾರ್ಥವಾಗಿ ಪ್ರಯತ್ನಿಸದೆ ಸ್ವಾರ್ಥಕ್ಕಾಗಿ ಜೀವಿಸಿರುವವರಿಗೆ ದ್ರವ್ಯ ದಾನ ಮಾಡಿದರೆ ಅದು ವ್ಯರ್ಥವಾಗುತ್ತದೆ. ಯಾವ ಹಣವು ಸತ್ಕಾರ್ಯಗಳಿಗೆ ವ್ಯಯವಾಗದೆ ದುಷ್ಟ ಕಾರ್ಯಗಳಿಗೇನೇ ವ್ಯಯವಾಗುತ್ತಿದೆಯೋ ಅದು ಪಾಪ ಮೂಲಕವಾಗಿಯೇ ಬಂದುದೆಂದು ತಿಳಿಯಬೇಕು. ಈ ವಿಷಯವನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ನಾನಾ ದುರಾಚಾರಗಳಿಂದ ಹಣವನ್ನು ಕೂಡಿಸಿದ ಪಾಪಿಯ ದ್ರವ್ಯವು ಅನೇಕ ದಂಡದ ಕಾರ್ಯಗಳಿಗೆ ವೆಚ್ಚವಾಗಿ ಹೋಗುವುದೇ ವಿನಾ ಪುಣ್ಯ ಕಾರ್ಯಗಳಿಗೆ ವಿನಿಯೋಗವಾಗುವುದಿಲ್ಲ. ನಾಯಿಯ ಹಾಲು ನಾಯಿಯ ಮರಿಗಳಿಗಲ್ಲದೆ ಪಂಚಾಮೃತಕ್ಕೇನಾದರೂ ಸಲ್ಲುತ್ತದೆಯೇ? ಇಲ್ಲವೇ ಇಲ್ಲ. ಶಿವನಲ್ಲಿ ಭಕ್ತಿಯುಳ್ಳಂಥ ಶಿವಶರಣರಿಗೆ ಸಮರ್ಪಿಸುವ ದ್ರವ್ಯವು ಸಾರ್ಥಕವಾದುದೇ ವಿನಾ ಅನ್ಯರಿಗೆ ಕೊಡುವ ಹಣವು ವ್ಯರ್ಥವಾದುದೇ ಸರಿ."

(೬೭) **ಹೊನ್ನಿನೊಳಗೊಂದೊರೆಯು| ಸೀರೆಯೊಳಗೊಂದೆಳೆಯು| ಅನ್ನದೊಳಗೊಂದಗುಳ | ಇಂದಿಂಗೆನಾಳಿಂಗೆ ಬೇಕೆಂದೆನಾದರೆ | ನಿಮ್ಮಾಣೆ ನಿಮ್ಮ ಪುರಾತನರಾಣೆ | ನಿಮ್ಮ ಶರಣಂಗಲ್ಲದೆ ಮತ್ತೊಂದನರಿಯೆ ಕೂಡಲಸಂಗಮದೇವ ||** ಭಕ್ತ ಸ್ಥಳ ೪೩೪.

**ವಿವರಣೆ**— ಪರಮಾತ್ಮನಲ್ಲಿ ದೃಢ ಭಕ್ತಿಯುಳ್ಳವರು ಇಂದಿನದು ನಾಳಿಗೆ ತಂಗುಳವೆಂದು ಭಾವಿಸುವರೇ ವಿನಾ ತಮಗೆ ಧನ-ಧಾನ್ಯ-ವಸ್ತ್ರಾದಿಗಳು ನಾಳೆಗೆ ಬೇಕೆಂದು ಕಾದಿಡುವುದಿಲ್ಲ. ಈ ದಿವಸ ಅನ್ನ ವಸ್ತ್ರಾದಿಗಳನ್ನು ಕೊಟ್ಟ ಪರಮಾತ್ಮನು ನಾಳೆಯೂ ಇರುತ್ತಾನೆಂಬ ದೃಢ ವಿಶ್ವಾಸವುಳ್ಳ ಆಸ್ತಿಕರಾಗಿರುತ್ತಾರೆ. ಆದಕಾರಣ ನಾಳೆಯ ದಿವಸ ತನಗೆ ಏನಾಗುವುದೋ ಎಂದು ಶಂಕಿಸಿ, ಈ ದಿವಸವೇ ಧನ-ಧಾನ್ಯಾದಿಗಳನ್ನು ಕೂಡಿಸದೆ, ನಾಳೆಯ ಸ್ಥಿತಿಯನ್ನು ಪರಮಾತ್ಮನ ಮೇಲೆಯೇ ಹಾಕಿ, ನಿಶ್ಚಿಂತರಾಗಿರುತ್ತಾರೆ. ಮಹಾನುಭಾವರಾದ ಜನ

ವಣ್ಣನವರು ಲೋಕದಲ್ಲಿ ಧನ-ಧಾನ್ಯಾದಿಗಳ ಸಂಗ್ರಹ ಪ್ರವೃತ್ತಿಯಿಂದುಂಟಾಗುವ ಅಶಾಂತತೆಯನ್ನು ನಿವಾರಣೆ ಮಾಡಿ ಸುಖಶಾಂತಿಗಳನ್ನುಂಟುಮಾಡಲು ಶ್ರೇಷ್ಠತರವಾದ ಈ ಅಪರಿಗ್ರಹ ವ್ರತವನ್ನಾಚರಿಸಿ ಬೋಧಿಸಿದ್ದಾರೆ.

"ಹೊಸ ಇಕ್ಕೇರಿ, ಹಳೆ ಇಕ್ಕೇರಿ ಮೊದಲಾದ ಒರೆಗಳುಳ್ಳ ಬಂಗಾರದಲ್ಲಿ ಒಂದು ಒರೆಯ ಬಂಗಾರವನ್ನಾಗಲಿ, ನಾನಾ ಪೀತಾಂಬರಗಳೇ ಮೊದಲಾದ ಸೀರೆಗಳಲ್ಲಿ ಒಂದು ಎಳೆಯಷ್ಟು ಸೀರೆಯನ್ನು ಪತ್ನಿಗೆ ಬೇಕೆಂದಾಗಲಿ, ಅನೇಕ ಪಕ್ವಾನ್ನಗಳಲ್ಲಿ ಒಂದಗುಳಿನಷ್ಟು ಅನ್ನವನ್ನಾಗಲಿ ನನಗೆ ಈ ದಿವಸ ಅಥವಾ ನಾಳೆಗೆ ಬೇಕೆಂದು ಸಂಗಮನಾಥನೆ, ನಿಮ್ಮಾಣೆಯಾಗಿಯೂ ನಿಮ್ಮಲ್ಲಿ ಅಸಾಧಾರಣವಾದ ಭಕ್ತಿಯನ್ನಿಟ್ಟಿದ್ದ ಪುರಾತನರ ಆಣೆಯಾಗಿಯೂ ಕಾದಿಟ್ಟುಕೊಳ್ಳುವುದಿಲ್ಲ. ಸಕಲ ಧನ-ಧಾನ್ಯ-ವಸ್ತ್ರಾದಿ ಐಶ್ವರ್ಯಗಳೆಲ್ಲವೂ ನಿಮ್ಮ ಶರಣರಿಗಲ್ಲದೆ, ಅನ್ಯರಿಗೆ ಕೊಡುವುದನ್ನು ನಾನರಿಯೆನು."

**(೬೮) ನಾನು ಆರಂಭವಮಾಡುವೆನಯ್ಯ ಗುರುಪೂಜೆಗೆಂದು | ನಾನು ಬೆವಹಾರ ಮಾಡುವೆನಯ್ಯ ಜಂಗಮ ದಾಸೋಹಕ್ಕೆಂದು | ನಾನಾವ ಕರ್ಮಗಳ ಮಾಡಿದರೆಯೂ ಆ ಕರ್ಮಫಲಭೋಗವ ನೀ ಕೊಡುವೆಯೆಂಬುದ ನಾ ಬಲ್ಲೆನು | ನೀಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದು ಕ್ರಿಯೆಯ ಮಾಡೆನು | ನಿಮ್ಮ ಸೊಮ್ಮಿಂಗೆ ಸಲಿಸುವೆನು | ನಿಮ್ಮಾಣೆ ಕೂಡಲ ಸಂಗಮದೇವ ||**

ಮಹೇಶಸ್ಥಳ ೧೮೩

**ವಿವರಣೆ**-ಪರಮಾತ್ಮನು ಧನ-ಧಾನ್ಯಾದಿ ಸಂಪತ್ತುಗಳನ್ನು ಪರಹಿತಾರ್ಥವಾಗಿ ವಿನಿಯೋಗಿಸುವುದಕ್ಕೋಸ್ಕರವಾಗಿಯೇ ನಮಗೆ ಕೊಡುತ್ತಾನೆ. ಲೋಕೋಪಕಾರದ ಕಾರ್ಯಗಳಿಗೆ ಧನ-ಧಾನ್ಯಾದಿಗಳನ್ನು ಸಮರ್ಪಿಸಿದರೆ ಪರಮಾತ್ಮನ ಹಣವನ್ನು ಪರಮಾತ್ಮನಿಗೇನೇ ಸಮರ್ಪಿಸಿದಂತಾಗುವುದು. ಏಕೆಂದರೆ, ಜೀವಿಗಳು ಪರಮಾತ್ಮನ ಸ್ವರೂಪಿಗಳಾಗಿಯೇ ಇವೆ ಆ ದ ಕಾ ರ ಣ ಪರಮಾತ್ಮನು ಕೊಟ್ಟ ಐಶ್ವರ್ಯವನ್ನು ಪ್ರಾಣಿಗಳ ಹಿತಾರ್ಥವಾಗಿ ವಿನಿಯೋಗಿಸುವವನು ಪ್ರಾಮಾಣಿಕನು. ಹಾಗೆ ಮಾಡದೆ ಆ ಹಣವನ್ನು ತನ್ನ ವಿಷಯೋಪಭೋಗಗಳಿಗೆ ವಿನಿಯೋಗಿಸಿಕೊಂಡರೆ ಪರರ ಹಣವನ್ನು ಅಪಹರಿಸಿದಂಥ ಅಪ್ರಮಾಣಿಕನಾಗುವನು. ಆದಪ್ರಯುಕ್ತ ನ್ಯಾಯವಾದ ಉದ್ಯೋಗವನ್ನು ಮಾಡಬೇಕು. ಅದರಲ್ಲಿ ಬರುವ ಲಾಭವು ಪರಮಾತ್ಮನ ಅನುಗ್ರಹವೆಂದು ಅದನ್ನು ಪರಹಿತಾರ್ಥವಾಗಿ ವಿನಿಯೋಗಿಸಬೇಕು. ಈ ಪ್ರಕಾರ ಆದಾಯ-ವ್ಯಯಗಳ ಸನ್ಮಾರ್ಗವನ್ನು ಈ ವಚನದಲ್ಲಿ ಬೋಧಿಸಿದ್ದಾರೆ.

"ನಾನು ಯಾವ ಕೆಲಸವನ್ನು ಪ್ರಾರಂಭಿಸಿದರೂ, ಯಾವ ವ್ಯವಹಾರವನ್ನು ಮಾಡಿದರೂ ಗುರು-ಲಿಂಗ-ಜಂಗಮ-ದಾಸೋಹಕ್ಕೆಂದೇ ಮಾಡುವೆನು. ನಾನು ಯಾವ ಕರ್ಮಗಳನ್ನು ಮಾಡಿದರೂ ಅವುಗಳ ಫಲಭೋಗಾದಿಗಳನ್ನು ಲಿಂಗದೇವನೇ, ನೀನೇ ಕೊಡುವಿಯೆಂಬುದನ್ನು ನಾನು ಬಲ್ಲೆನು. ನಿಮ್ಮಾಣೆಯಾಗಿಯೂ ನೀವು ಕೊಟ್ಟ ಹಣವನ್ನು ನಿಮಗೆ ಕೊಡುವೆನಲ್ಲದೆ, ಅನ್ಯಕಾರ್ಯಗಳಿಗೆ ಉಪಯೋಗಿಸುವುದಿಲ್ಲ"

**(೬೯) ಆದ್ಯರ ವಚನ ಪರುಷ ಕಂಡಯ್ಯ | ಸದಾಶಿವನೆಂಬ ಲಿಂಗವ ನೆರೆ ನಂಬುವುದು | ನಂಬಲೊಡನೆ ವಿಜಯ ಕಂಡ್ಯಣ್ಣಾ | ಅಧರಕ್ಕೆ ಕಹಿ ಉದರಕ್ಕೆ ಸಿಹಿ | ಕೂಡಲ ಸಂಗನ ಶರಣರ ವಚನ ಬೇವ ಸವಿದಂತೆ ||** ಭಕ್ತಸ್ಥಳ ೧೭೧

**ವಿವರಣೆ**-ಪರಮಾತ್ಮನಲ್ಲಿ ದೃಢವಾದ ಭಕ್ತಿಯನ್ನಿಟ್ಟರೆ ಆತನು ಸರ್ವದುಃಖಗಳಿಂದ ನಮ್ಮನ್ನು ಪಾರುಮಾಡುತ್ತಾನೆಂಬುದು ಭಗವದ್ಭಕ್ತರ ಅನುಭವೋಕ್ತಿಯಾಗಿದೆ. ಭಗವದ್ಗೀತೆಯಲ್ಲಿಯೂ ಇದೇ ಅಭಿಪ್ರಾಯವು 'ಅನನ್ಯಾಶ್ಚಿಂತಯಂತೋಮಾಂ | ಯೇಜನಾಃ ಪರ್ಯುಪಾಸತೇ | ತೇಷಾಂ ನಿತ್ಯಾಭಿಯುಕ್ತಾನಾಂ| ಯೋಗಕ್ಷೇಮಂ ವಹಾಮ್ಯಹಂ' ಎಂಬ ಶ್ಲೋಕದಲ್ಲಿ ಸ್ಪಷ್ಟವಾಗಿ ಹೇಳಿದೆ. ಆದರೆ ಈ ಆದ್ಯರ ವಚನವು ಚಂಚಲಚಿತ್ತವುಳ್ಳವರಿಗೆ ಬೇವಿನಂತೆ ಕಹಿಯಾಗಿ ತೋರುತ್ತದೆಂದು ಈ ವಚನದಲ್ಲಿ ವಿವರಿಸಿದ್ದಾರೆ.

"ಸದಾಶಿವನೇ ಲಿಂಗರೂಪದಲ್ಲಿ ಬಂದಿರುವುದರಿಂದ ಆತನನ್ನು ನಂಬಿದರೆ, ಈ ಸಂಸಾರದಲ್ಲಿ ನಮಗೆ ವೈರಿಗಳಾದ ಕಾಮ-ಕ್ರೋಧಾದಿಗಳು ಸೋತು ಹೋಗುತ್ತಾರೆಂಬ ಪುರಾತನರ ಸ್ವಾನುಭವದ ಹಿತವಚನವು ಪರುಷಪ್ರಾಯವಾದುದಾಗಿದೆ. ಪರುಷವು ಕಬ್ಬಿಣವನ್ನು ಮುಟ್ಟಿದಕೂಡಲೇ ಆ ಕಬ್ಬಿಣವು ಹೇಗೆ ಬಂಗಾರವಾಗುತ್ತದೆಯೋ, ಹಾಗೆಯೇ ಪುರಾತನರ ಈ ವಾಕ್ಯವನ್ನು ನಂಬಿ ಲಿಂಗಮೂರ್ತಿಯಲ್ಲಿ ದೃಢವಾದ ಭಕ್ತಿಯನ್ನಿಟ್ಟರೆ, ದುರ್ವಿಷಯಗಳಲ್ಲಿದ್ದ ಮನಸ್ಸೆಂಬ ಕಬ್ಬಿಣವು ನಿರ್ಮಲವಾಗಿ ಸುವರ್ಣಪ್ರಾಯವಾಗುವುದು. ಪುರಾತನರ ಈ ವಚನಾಮೃತವು ತುಟಿಗೆ ಬಹು ಕಹಿಯಾಗಿ ತೋರಿದರೂ, ಹೊಟ್ಟೆಗೆ ಬಹು ಸಿಹಿಯಾದುದಾಗಿದೆ. ಬೇವಿನ ರಸವು ಕುಡಿಯುವುದಕ್ಕೆ ಕಹಿಯಾಗಿದ್ದರೂ, ರೋಗನಿವಾರಣೆಗೆ ಹೇಗೆ ಅಮೃತಪ್ರಾಯವಾಗಿದೆಯೋ, ಹಾಗೆಯೇ ಹುಟ್ಟು-ಸಾವುಗಳೆಂಬ ಈ ಭವರೋಗ ನಿವಾರಣೆಗೆ ಲಿಂಗಮೂರ್ತಿಯನ್ನು ನಂಬುವುದು ಕಷ್ಟತರವಾದುದಾಗಿದ್ದರೂ ಬಹು ಪರಿಣಾಮಕಾರಿಯಾದುದಾಗಿದೆ."

**(೭೦) ಕಂಡ ಭಕ್ತರಿಗೆ ಕೈಮುಗಿಯುವಾತನೆ ಭಕ್ತ | ಮೃದು ವಚನವೆ ಸಕಲ ಜಪಂಗಳಯ್ಯ | ಮೃದು ವಚನವೆ ಸಕಲ ತಪಂಗಳಯ್ಯ| ಸದುವಿನಯವೆ ಸದಾಶಿವನೊಲುಮೆಯಯ್ಯ | ಕೂಡಲ ಸಂಗಯ್ಯನಲ್ಲದೊಲ್ಲನಯ್ಯ ||** **ಭಕ್ತಸ್ಥಳ ೨೪೩**

**ವಿವರಣೆ**-ಮನುಷ್ಯಪ್ರಾಣಿಗಿರುವ ವಾಚಾಶಕ್ತಿಯು ಅದ್ಭುತ ಸಾಮರ್ಥ್ಯವುಳ್ಳದ್ದಾಗಿದೆ. ಇದು ಸತ್ಯಪ್ರಿಯವಾದುದು ಎಷ್ಟು ಯುಕ್ತವಾದುದಾಗಿದೆಯೋ, ಅಷ್ಟೇ ನಯ-ವಿನಯಗಳುಳ್ಳದ್ದಾಗಿರುವುದೂ ಅಗತ್ಯವಾಗಿದೆ. ದುಷ್ಟ ಭಾಷಣ ಮತ್ತು ಕಠಿಣೋಕ್ತಿಗಳು ತೀಕ್ಷ್ಣವಾದ ಶಸ್ತ್ರಗಳಿಗಿಂತಲೂ ಬಹು ಭಯಂಕರವಾದ ನೋವನ್ನುಂಟುಮಾಡುತ್ತವೆ. ಆದಕಾರಣ ಈ ಘೋರ ಪಾಪಾಚರಣೆಯನ್ನಾಚರಿಸಿ ಅನೇಕ ವಿಪತ್ತುಗಳಿಗೆ ಮನುಷ್ಯರು ಆಹುತಿಯಾಗಬಾರದೆಂದು ಈ ವಚನದಲ್ಲಿ ನಯ-ವಿನಯಗಳ ಮಹತ್ವವನ್ನು ವಿವರಿಸಿದ್ದಾರೆ

“ಶಿವಭಕ್ತನಾದ ಮೇಲೆ ತಾನು ಕಂಡ ಭಕ್ತರಿಗೆ ಕೈಮುಗಿಯಬೇಕು. ಅಣ್ಣ, ತಮ್ಮ, ಅಕ್ಕ, ಅವ್ವ, ತಂಗಿ, ಬುದ್ಧೀ, ಸ್ವಾಮಿ ಎಂಬ ಗೌರವ ಮತ್ತು ಪ್ರೇಮಸೂಚಕ ಶಬ್ದಗಳನ್ನೇ ಉಪಯೋಗಿಸಬೇಕು. ಯಾರಿಗೂ ಕಠಿಣೋಕ್ತಿಗಳನ್ನಾಡದೆ ಮೃದು ವಚನಗಳನ್ನೇ ಉಪಯೋಗಿಸಿದರೆ ಸಕಲ ಜಪ-ತಪಗಳ ಪುಣ್ಯವು ಲಭಿಸುತ್ತದೆ. ಈ ವಿನಯ ಯುಕ್ತವಾದ ನಡೆನುಡಿಗಳೇ ಸದಾಶಿವನಿಗೆ ಮೆಚ್ಚುವವು. ಹೀಗೆ ವರ್ತಿಸದೆ ಅನ್ಯರ ಮನಸ್ಸಿಗೆ ನೋವಾಗುವಂತೆ ಕೆಟ್ಟ ಶಬ್ದಗಳನ್ನು ಉಪಯೋಗಿಸುವವರು ಸದಾಶಿವನ ಮೆಚ್ಚುಗೆಗೆ ಪಾತ್ರರಾಗುವುದಿಲ್ಲ.”

---

# ೫ ನೆಯ ಅಧ್ಯಾಯ.



**(೭೧) ದೂಷಕನವನೊಬ್ಬ ದೇಶವ ಕೊಟ್ಟರೆ ಆಶೆಮಾಡಿ ಅವನ ಹೊರೆಯಲ್ಲಿರಬೇಡ | ಮಾದಾರ ಶಿವಭಕ್ತನಾದರೆ ಆತನ ಹೊರೆಯಲ್ಲಿ ಭೃತ್ಯನಾಗಿಪ್ಪುದು ಕರಲೇಸಯ್ಯ | ತೊತ್ತಾಗಿಪ್ಪುದು ಕರಲೇಸಯ್ಯ | ಕಾಡಸೊಪ್ಪ ತಂದು ಓಡಿನಲ್ಲಿ ಹುರಿದಟ್ಟುಕೊಂಡು ಕೂಡಿಕೊಂಡಿಪ್ಪುದು ನಮ್ಮ ಕೂಡಲ ಸಂಗನ ಶರಣರ ||** **ಭಕ್ತಸ್ಥಳ ೧೩೬**

**ವಿವರಣೆ**-ಐಹಿಕ ಸುಖೋಪಭೋಗಗಳ ಆಶೆಗಾಗಿ ರಾಜನನ್ನಾಶ್ರಯಿಸಿ ದಾಗ ರಾಜನು ಆತ್ಮತತ್ವವನ್ನೂ, ಅಂಥ ಸಂಸ್ಕೃತಿಯನ್ನೂ ದೂಷಿಸುತ್ತಿದ್ದರೆ ಅವುಗಳನ್ನು ಕೇಳಿಕೊಂಡು ಅಂಥ ರಾಜನಲ್ಲಿ ದೇಶಾಧಿಪತಿಯಾಗಿರುವದಕ್ಕಿಂತಲೂ ಆತ್ಮ ಚಿಂತನೆಯಲ್ಲಿರುವ ಮಹಾಭಗವದ್ಭಕ್ತನು ಮಾದರ ಕುಲದಲ್ಲಿ ಹುಟ್ಟಿದವ ನಾಗಿದ್ದರೂ ಅವನನ್ನು ಆಶ್ರಯಿಸಿ, ಆತನ ಸೇವಕನಾಗಿರುವುದು ಒಳ್ಳೆಯದು. ಏಕೆಂದರೆ, ಆತ್ಮೋನ್ನತಿಯ ಮಾರ್ಗಕ್ಕೆ ವಿಘ್ನವನ್ನುಂಟುಮಾಡುವವನು ಎಷ್ಟು ಧನಧಾನ್ಯಗಳನ್ನು ಕೊಟ್ಟರೂ ಅವುಗಳನ್ನು ತೆಗೆದುಕೊಂಡು ಆತನ ಆಶ್ರಯದಲ್ಲಿ ರುವುದು ಅತ್ಯಂತ ಅನರ್ಥದಾಯಕವಾದುದಾಗಿದೆ. ಆದರೆ ಆತ್ಮೋನ್ನತಿಗೆ ಸಹಾಯಕನಾದ ಮಹಾತ್ಮನಾದರೋ, ಎಂತ ನೀಚಕುಲದಲ್ಲಿ ಹುಟ್ಟಿದವನಾಗಿದ್ದ ರೂ ಆತನನ್ನು ಆಶ್ರಯಿಸಿ ಆತನ ಸೇವೆಯಲ್ಲಿರುವುದು ಮಹತ್ತರವಾದ ಸುಖಕ್ಕೆ ಸಾಧನವಾಗಿದೆ. ಆದುದರಿಂದಲೇ "ಮ್ಲೇಂಛೋಪಿ ವಾ ಯದಿಭವೇದ್ಯ ಭಕ್ತಿ ಸಮನ್ವಿತಃ| ನತತ್ಸಮಶ್ಚತುರ್ವೇದೀ ನಾಗ್ನಿಷ್ಟೋಮಾದಿ ಯಜ್ಞಕೃತ್||" ಎಂದರೆ "ಶಿವಭಕ್ತಿಯುಳ್ಳ ಮ್ಲೇಂಛನು ಕೂಡಾ ವೇದಜ್ಞ ಯಜ್ಞ ದೀಕ್ಷಿತರುಗಳಿಗಿಂತ ಶ್ರೇಷ್ಠನು" ಎಂದು ಅನಾದಿ ವೀರಶೈವ ಸಾರಸಂಗ್ರಹ (೨೩-೨೭೮) ಗ್ರಂಥದಲ್ಲಿ ಹೇಳಿದೆ.

"ವೀರಶೈವ ಮತತತ್ವಗಳನ್ನು ದೂಷಿಸುತ್ತಿರುವವನು ರಾಜನಾಗಿದ್ದರೂ, ಆತನು ನಿನಗೆ ಒಂದು ದೇಶವನ್ನೇ ಉಂಬಳಿಯಾಗಿ ಕೊಟ್ಟರೂ, ಆ ದೇಶದ ಆಶೆ ಗಾಗಿ ಮತದೂಷಣೆಯನ್ನು ಕೇಳಿಕೊಂಡು ಆತನ ಹತ್ತಿರ ಇರಬೇಡ. ಶಿವಮತ ತತ್ವಗಳನ್ನರಿತುಕೊಂಡು ಭಕ್ತಿಪುರಸ್ಸರವಾಗಿ ಅವುಗಳನ್ನಾಚರಿಸುತ್ತಿರುವ ಶಿವ ಭಕ್ತನು ಮಾದರಕುಲದಲ್ಲಿ ಹುಟ್ಟಿದವನಾದರೂ ಆ ಮಹಾನುಭಾವನ ಹತ್ತಿರ ಆತನ ಆಳಾಗಿರುವುದು ಒಳ್ಳೆಯದು ಇಷ್ಟೇ ಅಲ್ಲ; ಆತನ ಆಳಿನ ಆಳಾಗಿರುವು ದಾದರೂ ಹಿತವೆ. ಏಕೆಂದರೆ, ಹೊನ್ನಗೊನೆ ಮೊದಲಾದ ಸೊಪ್ಪುಗಳು ಕಾಡಿ ನಲ್ಲಿ ಹುಟ್ಟಿದವುಗಳಾಗಿದ್ದರೂ ಅವುಗಳನ್ನು ತೆಗೆದುಕೊಂಡು ಒಂದು ಪಾತ್ರೆಯಲ್ಲಿ ಹುರಿದು ಅಡಿಗೆಯನ್ನು ಮಾಡಿದರೆ, ಆ ಕಾಡುಸೊಪ್ಪೇ ಲಿಂಗನೈವೇದ್ಯಕ್ಕೂ, ಜಂಗಮದಾಸೋಹಕ್ಕೂ ಹೇಗೆ ಅನುಕೂಲವಾಗುತ್ತದೆಯೋ, ಹಾಗೆಯೇ ಶಿವನಲ್ಲಿ ಭಕ್ತಿಯುಳ್ಳಾತನು ಮಾದರ ಕುಲದಲ್ಲಿ ಹುಟ್ಟಿದವನಾಗಿದ್ದರೂ ಆತನನ್ನು ಶ್ರೀಗುರು ವೆಂಬ ಪಾಕಶಾಸ್ತ್ರ ಪ್ರವೀಣನು ಶಿವಾಚಾರವೆಂಬ ಪಾತ್ರೆಯಲ್ಲಿ ಹಾಕಿ, ಶಿವಾ ದ್ವೈತ ಜ್ಞಾನವೆಂಬ ಅಗ್ನಿಯಿಂದ ಹುರಿಯುವ ಕಾರಣ ಆತನು ಲಿಂಗದೇವನ ಪ್ರೀತಿಗೂ ಶಿವಶರಣರ ಸಹವಾಸಕ್ಕೂ ಪಾತ್ರನಾದ ಮಹಾತ್ಮನಾಗುತ್ತಾನೆ."

**(೭೨) ಶ್ವಪಚನಾದರೇನು? ಲಿಂಗಭಕ್ತನೇ ಕುಲಜನು | ನಂಬಿ ನಂಬದಿದ್ದರೆ ಸಂದೇಹಿ ನೋಡ | ಕಟ್ಟಿದರೇನು, ಬಿಟ್ಟರೇನು? ಪೂಜಿಸಿದರೇನು ಮನವುಟ್ಟದನ್ನಕ್ಕ? | ಭಾವಶುದ್ಧವಿಲ್ಲದವಂಗೆ ಭಕ್ತಿ ನೆಲೆಗೊಳ್ಳದು | ಕೂಡಲ ಸಂಗಯ್ಯನೊಲಿದವಂಗಲ್ಲದೆ ||** ಮಹೇಶಸ್ಥಳ ೧೩೧

**ವಿವರಣೆ**-ಪರಮಾತ್ಮನಲ್ಲಿ ತನ್ನ ಪ್ರಾಣಕ್ಕಿಂತಲೂ ಹೆಚ್ಚಾದ ಪ್ರೇಮವುಳ್ಳಾತನೇ ನಿಜವಾದ ಭಕ್ತನು. ಇಂಥ ಭಕ್ತಿಯು ಯಾವಾತನಲ್ಲಿರುವುದೋ, ಆತನು ಯಾವ ಕುಲದವನಾಗಿದ್ದರೂ ಶ್ರೇಷ್ಠನೇ ಸರಿ. ಆದುದರಿಂದಲೇ ಭಗವದ್ಗೀತೆಯಲ್ಲಿ ಶ್ರೀ ಕೃಷ್ಣ ಪರಮಾತ್ಮನು ಕೂಡಾ "ಮಾಂಹಿ ಪಾರ್ಥ ವ್ಯಪಾಶ್ರಿತ್ಯ ಯೇಪಿಸ್ಯುಃ ಪಾಪಯೋನಯಃ | ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಪಿ ಯಾಂತಿ ಪರಾಂ ಗತಿಮ್ ||" (ಅ. ೯-೩೨) ಶೂದ್ರಾದಿ ಎಂಥಾ ನೀಚಕುಲದಲ್ಲಿ ಜನ್ಮವೆತ್ತಿದವರಾಗಿದ್ದರೂ ಅವರು ಪರಮಾತ್ಮನನ್ನೇ ಸೇರುತ್ತಾರೆಂದು ಹೇಳಿದ್ದಾನೆ. ಅನಾದಿ ವೀರಶೈವ ಸಾರಸಂಗ್ರಹ ಗ್ರಂಥದಲ್ಲಿ ಉದಾಹರಿಸಲ್ಪಟ್ಟಿರುವ ಈ ಕೆಳಗಿನ ಸ್ಕಾಂದ ಪುರಾಣೋಕ್ತಿಯು ಕೂಡಾ ಪರಮಾತ್ಮನಲ್ಲಿ ಭಕ್ತಿಯುಳ್ಳ ಅಂತ್ಯಜನು ಭಕ್ತಿಹೀನನಾದ ದ್ವಿಜನಿಗಿಂತಲೂ ಶ್ರೇಷ್ಠನೆಂದೇ ಪ್ರತಿಪಾದಿಸಿದೆ. "ಶ್ವಪಚೋಪಿ ಮುನಿಶ್ರೇಷ್ಠಃ ಶಿವಭಕ್ತೋ ದ್ವಿಜಾಧಿಕಃ| ಶಿವಭಕ್ತಿ ವಿಹೀನಶ್ಚ ದ್ವಿಜೋಪಿ ಶ್ವಪಚಾಧಮಃ ||" (೨೩-೨೯೫) ಆದಕಾರಣ ಭಕ್ತಿಯು ಕುಲಬಂಧನವನ್ನ ತೆಗೆದುಹಾಕಿ ಆತನನ್ನು ಪವಿತ್ರಗೊಳಿಸುತ್ತದೆಂಬ ವೈದಿಕ ಧರ್ಮದ ಶ್ರೇಷ್ಠ ತತ್ವವು ಈ ವಚನದಲ್ಲಿ ವಿವರಿಸಲ್ಪಟ್ಟಿದೆ.

"ಅಂತ್ಯಜರ ಕುಲದಲ್ಲಿ ಹುಟ್ಟಿದರೂ ಚಿಂತೆಯಿಲ್ಲ. ಆತನು ಲಿಂಗದೇವನಲ್ಲಿ ದೃಢತರವಾದ ಭಕ್ತಿಯುಳ್ಳವನಾಗಿದ್ದರೆ ಆತನೇ ಶ್ರೇಷ್ಠ ಕುಲದವನೆಂದು ತಿಳಿಯಬೇಕು. ಏಕೆಂದರೆ, ಶಿವನ ಕೃಪೆಯಿಲ್ಲದೆ ಭಾವವು ಬಲಿಯುವುದಿಲ್ಲ. ಭಾವವು ದೃಢವಾದ ವಿನಾ ಭಕ್ತಿಯು ನೆಲಿಸುವುದಿಲ್ಲ. ಆದಕಾರಣ ಲಿಂಗದೇವನಲ್ಲಿ ದೃಢಭಕ್ತಿಯುಳ್ಳವಗೆ ಶಿವನ ಕೃಪೆಯಾಗಿದೆಯೆಂದು ತಿಳಿದು, ಆತನು ಯಾವ ಕುಲದಲ್ಲಿ ಹುಟ್ಟಿದವನಾಗಿದ್ದರೂ, ಉತ್ತಮ ಕುಲದವನೆಂದೇ ತಿಳಿಯಬೇಕು. ಇಂಥ ಶುದ್ಧಾತ್ಮನೇ ಶ್ರೇಷ್ಠಕುಲದವನೆಂಬುದನ್ನು ಯಾರು ನಂಬುವುದಿಲ್ಲವೋ ಅವರು ಶಿವಭಕ್ತಿಯ ಮಹತ್ವದ ವಿಷಯದಲ್ಲಿ ಸಂದೇಹವುಳ್ಳವರೆಂದು ತಿಳಿಯಬೇಕು. ಶಿವನಲ್ಲಿ ಮನಸ್ಸಿಲ್ಲದ ಇಂಥ ಸಂದೇಹಿಗಳು ಲಿಂಗವನ್ನು ಕಟ್ಟಿದರೂ, ಪೂಜಿಸಿದರೂ, ಬಿಟ್ಟರೂ ವ್ಯರ್ಥವೇ ಸರಿ.

**(೭೩) ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ | ಜಲ ಬಿಂದುವಿನ ವ್ಯವಹಾರವೊಂದೆ | ಆಶೆಯಾಮಿಷ ಹರುಷ ವಿಷಯಾದಿಗಳೆಲ್ಲ ವೊಂದೆ ಏನನೋದಿ ಏನಕೇಳಿ ಏನುಫಲ? ಕುಲಜನೆಂಬುದಕ್ಕೆ ಆವುದು ದೃಷ್ಟ? 'ಸಪ್ತಧಾತು ಸಮಂ ಪಿಂಡಂ | ಸಮಯೋನಿಸಮುದ್ಭವಂ | ಆತ್ಮಜೀವ ಸಮಾಯುಕ್ತಂ | ವರ್ಣಾನಾಂ ಕಿಂ ಪ್ರಯೋಜನಂ, ಎಂಬುದಾಗಿ ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ | ಹಾಸನಿಕ್ಕಿ ಸಾಲಿಗನಾದ | ವೇದವನೋದಿ ಹಾರುವನಾದ | ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ? ಇದು ಕಾರಣ ಕೂಡಲ ಸಂಗಮದೇವ ಲಿಂಗಸ್ಥಲವನರಿದವನೆ ಕುಲಜನು ||** ಮಹೇಶಸ್ಥಳ ೬೪.

**ವಿವರಣೆ**-ಜನ್ಮದಿಂದಲೇ ಶ್ರೇಷ್ಠ ಕನಿಷ್ಠರೆಂಬ ಜನ್ಮವಿಶಿಷ್ಟವಾದ ವರ್ಣ ಕಲ್ಪನೆಯು ಅನ್ಯಾಯವಾದುದೂ, ಅನರ್ಥಕಾರಿಯಾದುದೂ ಆಗಿರುವುದರಿಂದ, ಗುಣಕರ್ಮ ಸ್ವಭಾವಗಳ ಮೇಲಿಂದಲೇ ಉಚ್ಚ-ನೀಚ ತತ್ವಗಳನ್ನು ತಿಳಿಯಬೇಕೆಂಬ ಶ್ರೇಷ್ಠತರವಾದ ವೈದಿಕ ತತ್ವವು ಈ ವಚನದಲ್ಲಿ ವಿವರವಾಗಿ ಪ್ರತಿಪಾದಿಸಲ್ಪಟ್ಟಿದೆ. 'ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮವಿಭಾಗಶಃ' ಎಂಬ ಭಗವದ್ಗೀತೆಯ ವಾಕ್ಯವು ಕೂಡಾ ಗುಣ ಕರ್ಮ-ವಿಶಿಷ್ಟವಾದ ವರ್ಣಕಲ್ಪನೆಯನ್ನೇ ಹೇಳುತ್ತಿದೆಯಷ್ಟೆ. ಅನಾದಿ ವೀರಶೈವಸಾರಸಂಗ್ರಹ ಗ್ರಂಥದಲ್ಲಿ ಉದಾಹರಿಸಲ್ಪಟ್ಟಿರುವ "ಜನ್ಮನಾ ಜಾಯತೆ ಶೂದ್ರಃ ಕರ್ಮಣಾ ದ್ವಿಜ ಉಚ್ಯತೆ| ವೇದಾಭ್ಯಾಸಾದ್ಭವೇದ್ವಿಪ್ರೋ ಬ್ರಹ್ಮಾಚರತಿ ಬ್ರಾಹ್ಮಣಃ ||" (೨೩-೪೮) ಮತ್ತು "ಅಂತ್ಯಜಾತಿರ್ದ್ವಿಜಾತಿರ್ವಾ ಏಕಯೋನಿ ಸಮುದ್ಭವಃ | ಸಪ್ತಧಾತು ಸಮಂ ಪಿಂಡಂ ವರ್ಣಾನಾಂ ಕಿಂ ಪ್ರಯೋಜನಂ ||" (೪೯-೪೯) ಎಂಬ ಉಕ್ತಿಗಳ ಮೇಲಿಂದಲೂ, ಜನ್ಮ ವಿಶಿಷ್ಟವಾದ ವರ್ಣ ಕಲ್ಪನೆ ಅಥವಾ ಉಚ್ಚ-ನೀಚತ್ವಗಳ ಭಾವನೆಯು ಅಸಮಂಜಸವಾದುದಾಗಿಯೂ, ಅನಾವಶ್ಯಕವಾದುದಾಗಿಯೂ ಇದೆಯೆಂತಲೂ, ಗುಣ-ಕರ್ಮ-ಸ್ವಭಾವಗಳ ಮೇಲಿಂದಲೇ ಪ್ರತಿಯೊಬ್ಬನು ಶ್ರೇಷ್ಠ ಕನಿಷ್ಠನಾಗುತ್ತಿದ್ದಾನೆಂತಲೂ ಸ್ಪಷ್ಟವಾಗುತ್ತದೆಯಷ್ಟೆ. ಈ ಸನಾತನ ಧರ್ಮ ತತ್ವವೇ ಈ ವಚನದಲ್ಲಿ ಮಹಾನುಭಾವರಿಂದ ವಿವರಿಸಲ್ಪಟ್ಟಿದೆ.

"ಎಲ್ಲರೂ ಶುಕ್ಲ-ಶೋಣಿತಗಳಿಂದ ಕೂಡಿ ಪಿಂಡವಾಗಿ ತಾಯಿಯ ಗರ್ಭದಲ್ಲಿ ವಾಸವಾಗಿದ್ದು ಆಶೆ, ಕೋಪ, ಸಂತೋಷಾದಿ ಮನೋವಿಕಾರಗಳುಳ್ಳವರಾಗಿ ಯೋನಿಯಮೂಲಕವೇ ಹುಟ್ಟುತ್ತಾರಲ್ಲದೆ, ಇವುಗಳಿಗೆ ಹೊರತಾಗಿ ಕಿವಿಗಳಲ್ಲೇನಾದರೂ ಜನಿಸಿದವರು ಜಗತ್ತಿನಲ್ಲಿದ್ದಾರೆಯೇ? ಇಲ್ಲವೇ ಇಲ್ಲ. ಹೀಗಿ

ರುವಾಗ 'ನಾನು ಬ್ರಾಹ್ಮಣ, ಆತನು ಕ್ಷತ್ರಿಯ, ಈತನು ವೈಶ್ಯ, ಆತನು ಶೂದ್ರನೆಂಬ ಜನ್ಮ ವಿಶಿಷ್ಟವಾದ ವರ್ಣವನ್ನು ಹೇಳುವುದು ಅನಾವಶ್ಯಕವಲ್ಲವೇ? ಎಷ್ಟು ವೇದವೇದಾಂತಗಳನ್ನು ಓದಿದರೂ, ಎಷ್ಟು ಪುರಾಣ ಪುಣ್ಯಕಥೆಗಳನ್ನು ಕೇಳಿದರೂ ಈ ಜನ್ಮವಿಶಿಷ್ಟವಾದ ವರ್ಣಗಳು ನಿರರ್ಥಕವಾದವುಗಳೆಂಬ ತಿಳುವಳಿಕೆಯುಂಟಾಗದಿದ್ದರೆ ಆ ಓದು ಕೇಳಿಕೆಗಳಿಂದ ಪ್ರಯೋಜನವೇನು? ಕಬ್ಬಿಣವನ್ನು ಕಾಸಿ ಬಡಿಯುವವಗೆ ಕಮ್ಮಾರನೆಂತಲೂ, ಬಟ್ಟೆಗಳನ್ನು ಬೀಸಿ ಒಗೆಯುವಾತನಿಗೆ ಮಡಿವಾಳನೆಂತಲೂ, ಹಾಸುಹೊಯಿದುದರಿಂದ ಸಾಲಿಗನೆಂತಲೂ, ವೇದಗಳನ್ನು ಓದಿದುದರಿಂದ ಹಾರುವನೆಂತಲೂ ಈ ಪ್ರಕಾರ ಅವರ ಕರ್ಮ ಅಥವಾ ಉದ್ಯೋಗಗಳ ಮೇಲಿಂದ ಆಯಾಯ ಹೆಸರುಗಳು ಬಂದಿವೆ. ಯಾವಾತನು ಲಿಂಗಾಂಗ ಸಾಮರಸ್ಯವನ್ನರಿದಿದ್ದಾನೆಯೋ, ಆತನು ಶ್ರೇಷ್ಠ ಕುಲದವನು."

**(೭೪) ದೇವಸಹಿತ ಭಕ್ತಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡೆನಾದರೆ ನಿಮ್ಮಾಣೆ ನಿಮ್ಮ ಪುರಾತನರಾಣೆ | ತಲೆದಂಡ ತಲೆದಂಡ ಕೂಡಲ ಸಂಗಮದೇವ | ಭಕ್ತರಲ್ಲಿ ಕುಲವನಾರಿಸಿದರೆ ನಿಮ್ಮ ರಾಣಿವಾಸದಾಣೆ ||**

**ಭಕ್ತಸ್ಥಳ ೪೫೧.**

**ವಿವರಣೆ**-ವೀರಶೈವ ಮತದಲ್ಲಿ ಕಾಯಕವು ಒಂದು ಮಹತ್ವದ ವಿಷಯವಾಗಿದೆ. ಕಾಯವಿರುವವರೆಗೂ ಯಾವುದಾದರೊಂದು ಸದುದ್ಯೋಗವನ್ನು ಮಾಡಿಯೇ ಆ ಮೂಲಕ ಬರುವ ಆದಾಯದಿಂದ ಗುರು-ಲಿಂಗ-ಜಂಗಮ ತೃಪ್ತಿಯನ್ನು ಮಾಡಬೇಕು. ಅನ್ಯ ಪ್ರಾಣಿಗಳಿಗೆ ಅಹಿತವಾಗದಿರುವ ಯಾವ ಉದ್ಯೋಗವಾದರೂ ಅದು ಶಿವಭಕ್ತರಾಚರಿಸುವ ಕಾಯಕವಾಗಿಯೇ ಇದೆ. ಅಂಥ ಕಾರ್ಯಗಳಲ್ಲಿ ಶ್ರೇಷ್ಠ ಕನಿಷ್ಠವಾದವುಗಳಿಲ್ಲ ಮತ್ತು ಆಯಾಯ ಕಾಯಕಗಳ ಮೇಲಿಂದ ಉತ್ತಮ ಅಧವಾ ಕೀಳು ಕುಲದವರೆಂದು ತಿಳಿಯಲೂ ಬಾರದು. ವೀರಶೈವ ಮತದಲ್ಲಿ ಬೇಕಾದವರು ಶಿವಭಕ್ತಿ ಮೊದಲಾದ ಶ್ರೇಷ್ಠ ಗುಣಗಳನ್ನು ಹೊಂದಲು ಹೇಗೆ ಗುಣಸ್ವಾತಂತ್ರ್ಯವುಂಟೋ, ಹಾಗೆಯೇ ಕರ್ಮ ಅಥವಾ ಕಾಯಕ ಇಲ್ಲವೆ ಉದ್ಯೋಗ ಸ್ವಾತಂತ್ರ್ಯವಾದರೂ ಈ ಮತದವರಿಗೆ ಇದ್ದೇ ಇದೆ. ಆದುದರಿಂದಲೇ ಮೋಳಿಗೆಯ ಮಾರಯ್ಯನವರು ಕಟ್ಟಿಗೆಯ ಹೊರೆಯನ್ನು ಮಾರುತ್ತಿದ್ದರು; ನುಲಿಯ ಚಂದಯ್ಯನವರು ಹಗ್ಗಗಳನ್ನು ಮಾಡುತ್ತಿದ್ದರು; ಹಡಪದ ಅಪ್ಪಣ್ಣನವರು ಕ್ಷೌರವನ್ನು ಮಾಡುತ್ತಿದ್ದರು; ಮಡಿವಾಳ ಮಾಚಯ್ಯನವರು ಬಟ್ಟೆಗಳನ್ನು ತೊಳೆಯುತ್ತಿದ್ದರು; ಹರಳಯ್ಯನವರು ಪಾದರಕ್ಷೆಗಳನ್ನು ಮಾಡುತ್ತಿದ್ದರು. ಇವರೆಲ್ಲರೂ ಸಮಾನ ಪೂಜ್ಯರಾಗಿಯೇ ಇದ್ದರು. ಆದುದರಿಂದ

ಕಾಯಕವು ಕುಲವಾಗಿ ಪರಿಣಮಿಸುವುದಿಲ್ಲ. ಈ ತತ್ವವನ್ನೇ ಮಹಾನುಭಾವರು ಈ ವಚನದಲ್ಲಿ ವಿವರಿಸಿ, ನಾನು ಶಿವಭಕ್ತರಲ್ಲಿ ಕುಲವನ್ನಾರಿಸುವದಿಲ್ಲವೆಂದು ಸಾರಿ ಸಾರಿ ಹೇಳಿದ್ದಾರೆ. ಅನಾದಿ ವೀರಶೈವಸಾರಸಂಗ್ರಹ ಗ್ರಂಥದಲ್ಲಿ ಉಕ್ತವಾಗಿರುವ 'ಶಿವಸಂಸ್ಕಾರ ಸಂಪನ್ನೋಽಯಂ ಶೂದ್ರೋಽಯಾಂ ದ್ವಿಜಃ | ಲಿಂಗಭೇದ ಕೃತೋಯೇನ ರೌರವಂ ನರಕಂ ವ್ರಜೇತ್ ||' (೨೩-೨೮೭) ಎಂಬ ಶ್ಲೋಕದಲ್ಲಿ ಯೂ ಶಿವದೀಕ್ಷೆಯಾಗಿ ಇಷ್ಟಲಿಂಗವನ್ನು ಧರಿಸಿದನಂತರ- 'ಆತನು ಶೂದ್ರನು, ಈತನು ದ್ವಿಜನು' ಎಂದು ಕುಲವನ್ನೆತ್ತಿ ಆಡಿದರೆ ಆತನು ಭಯಂಕರವಾದ ನರಕ ಹೊಂದುತ್ತಾನೆಂದೇ ಹೇಳಿದೆ.

"ಇಷ್ಟಲಿಂಗವನ್ನು ಧರಿಸಿದ ಶಿವಭಕ್ತನು ಮನೆಗೆ ಬಂದರೆ ನಿನ್ನ ಕಾಯಕ ಎಂದರೆ ಉದ್ಯೋಗ ಯಾವುದೆಂದು ಸಂಗಮನಾಥನೇ, ನಿಮ್ಮಾಣೆಯಾಗಿಯೂ, ಪುರಾತನರ ಆಣೆಯಾಗಿಯೂ ನಾನು ಕೇಳುವುದಿಲ್ಲ. ಹಾಗೆ ಕೇಳಿದರೆ ನನ್ನ ತಲೆಯು ಒಡೆದು ಹೋಗಲಿ. ಶಿವಭಕ್ತರಲ್ಲಿ ಕುಲಗಳನ್ನು ನಾನು ಆರಿಸಿದರೆ ನನಗೆ ಮಾತೃ ದ್ರೋಹದ ಪಾಪವು ಬರಲಿ."

**(೭೫) ಉಂಬಲ್ಲಿ ಉಡುವಲ್ಲಿ ಕ್ರಿಯೆ ಅಳಿಯಿತ್ತೆಂಬರು| ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು | ಎಂತಯ್ಯ ಅವರ ಭಕ್ತರೆಂತೆಂಬೆ? ಎಂತಯ್ಯ ಅವರ ಯುಕ್ತರೆಂತೆಂಬೆ? ಕೂಡಲ ಸಂಗಮದೇವಯ್ಯ ಕೇಳಯ್ಯ | ಹೊಲತಿ ಶುದ್ಧ ನೀರಮಿಂದಂತಾಯಿತಯ್ಯ ||** ಮಹೇಶಸ್ಥಳ ೧೦೨

**ವಿವರಣೆ**-ಶಿವದೀಕ್ಷೆಯನ್ನು ಹೊಂದಿ ಇಷ್ಟಲಿಂಗವನ್ನು ಧರಿಸಿದ ನಂತರ ಅವರ ಉದ್ಯೋಗಗಳ ಮೇಲಿಂದ ಶ್ರೇಷ್ಠಕನಿಷ್ಟಗಳೆಂಬ ಕುಲಗಳನ್ನು ಕಲ್ಪಿಸಿ, ಅನ್ನೋದಕ ವ್ಯವಹಾರಗಳನ್ನೂ, ದೇಹಸಂಬಂಧಗಳನ್ನೂ ಅನೇಕರು ಮಾಡುವುದಿಲ್ಲವಷ್ಟೆ. ಇದು ವೀರಶೈವ ಮತಕ್ಕೆ ವಿರೋಧವಾದ ಆಚರಣೆಯೆಂದು ಈ ವಚನದಲ್ಲಿ ಮಹಾನುಭಾವರು ನಿಷೇಧಿಸಿದ್ದಾರೆ. ವೀರಶೈವ ಮತದೀಕ್ಷೆಯಾದ ನಂತರ ಆತನ ಹಿಂದಿನ ಕುಲವೇ ಮೊದಲಾದವುಗಳನ್ನಾಗಲಿ, ಆತನ ಕಾಯಕಗಳನ್ನಾಗಲಿ ಯೋಚಿಸದೆ ಅವರ ಸಂಗಡ ಅನ್ನೋದಕ ವ್ಯವಹಾರಗಳನ್ನು ಮಾಡಲಿಕ್ಕೂ, ದೇಹಸಂಬಂಧ ಬೆಳೆಸಲಿಕ್ಕೂ ಯಾವ ಅಭ್ಯಂತರವೂ ಇಲ್ಲ.

ಹರಳಯ್ಯ ಮಧುವಯ್ಯಗಳು ಶರೀರಸಂಬಂಧವನ್ನು ಬೆಳೆಸಿದುದಾದರೂ ವೀರಶೈವ ಸಿದ್ಧಾಂತದಂತೆಯೇ ಸರಿ. ಮಹಾನುಭಾವರು ಬೋಧಿಸಿದ ಈ ತತ್ವಗಳು ಪ್ರಾಚೀನ ವೈದಿಕ ಗ್ರಂಥಗಳಲ್ಲಿ ವಿವರವಾಗಿ ಪ್ರಕಟಿಸಲ್ಪಟ್ಟವೆ. ಅನಾದಿ ವೀರಶೈವ ಸಾರಸಂಗ್ರಹ ಗ್ರಂಥದಲ್ಲಿ ಉದಾಹರಿಸಲ್ಪಟ್ಟ ವಾತುಲ ತಂತ್ರೋಕ್ತಿ

ಯು "ಇಂಧನಂ ವಹ್ನಿ ಸಂಪರ್ಕಾದ್ವೃಕ್ಷನಾಮ ವಿನಶ್ಯತಿ | ಶಿವಸಂಸ್ಕಾರ ಸಂಪನ್ನೇ ಜಾತಿಭೇದಂ ನಕಾರಯೇತ್ ||" (೨೩-೨೮೧) ಎಂಬುದಾಗಿದೆ. ನಾನಾ ಜಾತಿಯ ಕಟ್ಟಿಗೆಗಳನ್ನು ಬೆಂಕಿಯು ಸುಟ್ಟ ನಂತರ ಹೇಗೆ ಬೂದಿಯಲ್ಲಿ ಕಟ್ಟಿಗೆಯ ಜಾತಿಗಳುಳಿಯುವುದಿಲ್ಲವೋ, ಹಾಗೆಯೇ ಯಾವ ಕುಲದವನಾಗಿದ್ದರೂ ಶಿವದೀಕ್ಷಾ ಸಂಸ್ಕಾರವನ್ನು ಹೊಂದಿದ ನಂತರ ಆತನಲ್ಲಿ ಹಿಂದಿನ ಕುಲಜಾತಿಗಳುಳಿಯುವುದಿಲ್ಲ. ಆದಕಾರಣ ಶಿವಭಕ್ತರಲ್ಲಿ ಜಾತಿಭೇದವನ್ನು ಮಾಡಬಾರದು. ಮತ್ತು ಇದೇ ಗ್ರಂಥದಲ್ಲಿ ಉದಾಹರಿಸಲ್ಪಟ್ಟ ಸಾಮವೇದ ವಾಕ್ಯವು ಸ್ಪಷ್ಟವಾಗಿಯೇ ಶಿವಭಕ್ತರಲ್ಲಿ ಜಾತಿಭೇದಗಳನ್ನು ಮಾಡದೆ ಅನ್ನೋದಕ ವ್ಯವಹಾರಗಳನ್ನು ಮಾಡಬೇಕೆಂದು ಹೇಳಿದೆ. "ವದೇತ್ತೇನ ವಸೇತ್ತೇನ ವಿಶೇತ್ತೇನ ಪುನಃಪುನಃ | ಭುಂಜೀತ ಸಾಕಂ ಭುಂಜೀತೇತ್ಯಾಹ ಸಾಮಶ್ರುತಿಃ ಖಲು ||" (೨೩-೨೯೭)

"ಶಿವಭಕ್ತರಲ್ಲಿಯೇ ಒಬ್ಬರು ಇನ್ನೊಬ್ಬರಲ್ಲಿ ಊಟಮಾಡಿದರೆ ತಮ್ಮ ಆಚಾರ ಕೆಟ್ಟಿತೆಂದು ಹೇಳುವರಲ್ಲಾ! ದೇಹಸಂಬಂಧವನ್ನು ಬೆಳೆಸುವಾಗ ತಮ್ಮ ಕುಲದವರೇ ಬೇಕೆಂದು ಕುಲವನ್ನು ಆರಿಸುವರಲ್ಲಾ! ಇವರು ಶಿವಭಕ್ತರೆಂದು ನಾನು ಹೇಗೆ ಹೇಳಲಿ? ಇವರು ಶಿವಾಚಾರ ಯುಕ್ತರೆಂದು ನಾನೆಂತು ಹೇಳಲಿ? ಸಂಗಮನಾಥ, ಕೀಳು ಗುಣವುಳ್ಳ ಹೊಲತಿಯು ಶುದ್ಧ ನೀರಿನಲ್ಲಿ ಸ್ನಾನ ಮಾಡಿದ ಮಾತ್ರದಲ್ಲಿ ಹೇಗೆ ಆಕೆಯ ಗುಣಗಳು ನಾಶವಾಗುವುದಿಲ್ಲವೋ, ಹಾಗೆಯೇ ಇವರು ಶಿವದೀಕ್ಷೆಯನ್ನು ಹೊಂದಿ ಲಿಂಗವನ್ನು ಧರಿಸಿಕೊಂಡದ್ದಾಯಿತೇ ವಿನಾ ಆ ಸಂಬಂಧವಾದ ಜ್ಞಾನೋದಯವಾಗಲಿಲ್ಲವಲ್ಲಾ!"

**(೭೬) ದೇವದೇವ ಬಿನ್ನಹವ ಅವಧಾರು | ವಿಪ್ರಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೊಂದೆಯೆಂಬೆ | ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಯಾದವರನ್ನೆಲ್ಲರನೊಂದೆಯೆಂಬೆ | ಹೀಗೆಂಬುದೆನ್ನ ಮನವು | ಈ ನುಡಿದ ನುಡಿಯೊಳಗೆಳ್ಳಮೊನೆಯಷ್ಟು ಸಂದೇಹವುಳ್ಳರೆ | ಹಲ್ಲುದೋರಿ ಮೂಗಕೊಯ್ಯಾ ಕೂಡಲಸಂಗಮದೇವ ||**

**ಭಕ್ತಸ್ಥಳ ೮೫.**

**ವಿವರಣೆ-** ಪರಮಾತ್ಮನಲ್ಲಿ ಭಕ್ತಿಯುಳ್ಳವರೆಲ್ಲಾ ಒಂದು ಕುಲದವರು. ಅವರ ಜನ್ಮ ಕರ್ಮಾದಿಗಳು ಎಷ್ಟೇ ಭಿನ್ನವಾಗಿದ್ದರೂ ಆ ಭಗವದ್ಭಕ್ತರೆಲ್ಲರೂ ಮುಮುಕ್ಷುಗಳ ವರ್ಗಕ್ಕೆ ಸೇರಿದವರು. ಪರಮಾತ್ಮನಲ್ಲಿ ಭಕ್ತಿಯಿಲ್ಲದೆ ಭವಕ್ಕೆ ಬರುತ್ತಿರುವ ಭವಿಗಳೆಲ್ಲರೂ ಒಂದೇ ವರ್ಗದವರು. ಅವರ ಜನ್ಮ ಕರ್ಮಾದಿಗಳು ನೋಡಲಿಕ್ಕೆ ಎಷ್ಟೇ ಶ್ರೇಷ್ಠವಾಗಿಯೂ, ಭಿನ್ನವಾಗಿಯೂ ತೋರುತ್ತಿದ್ದರೂ ಅವ

ರೆಲ್ಲರೂ ಭವಿಗಳು. ಈ ಪ್ರಕಾರ ಮನುಷ್ಯರಲ್ಲಿ ಮುಕ್ತಿಮಾರ್ಗಿಗಳು ಮತ್ತು ಭವ ಮಾರ್ಗಿಗಳು ಎಂಬೆರಡೇ ಭೇದಗಳಿವೆಯೆಂಬುದನ್ನು ಈ ವಚನದಲ್ಲಿ ಪ್ರತಿಪಾದಿಸಿದ್ದಾರೆ.

"ದ್ವೌಭೂತಸರ್ಗೌಲೋಕೇಸ್ಮಿನ್‌ದೈವ ಆಸುರ ಏವ ಚ" | (೧೬-೬) ಮತ್ತು 'ದೈವೀಸಂಪದ್ವಿಮೋಕ್ಷಾಯ ನಿಬಂಧಾಯಾಸುರೀಮತಾ | (೧೬-೫) ಈ ಭಗವದ್ಗೀತೆಯ ಉಕ್ತಿಗಳು ಕೂಡಾ ಲೋಕದಲ್ಲಿ ದೈವೀ ಸಂಪತ್ತುಳ್ಳವರು ಮತ್ತು ಆಸುರೀ ಸಂಪತ್ತುಳ್ಳವರು ಎಂಬ ಎರಡು ಪ್ರಕಾರದ ಜನಗಳಿದ್ದಾರೆಂತಲೂ ದೈವೀ ಸಂಪತ್ತುಳ್ಳವರು ಮೋಕ್ಷವನ್ನೂ, ಆಸುರೀ ಸಂಪತ್ತುಳ್ಳವರು ಬಂಧನವನ್ನೂ ಎಂದರೆ ಭವಕ್ಕೆ ಬರುವ ಮಾರ್ಗವನ್ನೂ ಹೊಂದುತ್ತಿದ್ದಾರೆಂತಲೂ ಸ್ಪಷ್ಟವಾಗಿ ಹೇಳುತ್ತಿವೆ. ಇವೇ ಎರಡು ಮಾರ್ಗಗಳು 'ಭಕ್ತ' 'ಭವಿ' ಎಂಬುದಾಗಿ ಈ ವಚನದಲ್ಲಿ ಹೇಳಲ್ಪಟ್ಟಿವೆ.

ಅನಾದಿ ವೀರಶೈವ ಸಾರಸಂಗ್ರಹ ಗ್ರಂಥದಲ್ಲಿ ಉದಾಹರಿಸಲ್ಪಟ್ಟ ವಾಯುವೀಯ ಸಂಹಿತೆಯ 'ಚತುರ್ವೇದಧರೋ ವಿಪ್ರಃ ಶಿವಭಕ್ತಿವಿವರ್ಜಿತಃ | ಭವಿತೇನೈವ ಸಂಭಾಷ್ಯಶ್ಚಂಡಾಲಾಧಮ ಉಚ್ಯತೆ ||' (೨೨-೨೯೬) ಎಂಬ ಉಕ್ತಿಯಾದರೂ ನಾಲ್ಕು ವೇದಗಳನ್ನು ಮುಖೋದ್ಗತವಾಗಿ ಹೇಳುತ್ತಿರುವ ವಿಪ್ರನು ಶಿವಭಕ್ತಿ ವಿಹೀನನಾಗಿದ್ದರೆ ಆತನು ಭವಕ್ಕೆ ಬರತಕ್ಕ ಭವಿಯೆಂದು ತಿಳಿದು ಆತನ ಸಂಗಡ ಮಾತನಾಡಕೂಡದೆಂತಲೂ, ಆತನು ಚ ೦ ಡಾ ಲ ರ ೦ ತೆ ಕೀಳೆಂತಲೂ ಹೇಳುತ್ತಿದೆ, ಈ ತತ್ವವನ್ನೇ ಮಹಾನುಭಾವರು ಈ ವಚನದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ.

"ಎಲೈ ಸಂಗಮನಾಥನೇ, ನನ್ನ ಬಿನ್ನಹವನ್ನು ಲಾಲಿಸು. ಶಿವಭಕ್ತಿಯುಕ್ತರಾದ ವಿಪ್ರರೇ ಮೊದಲಾಗಿ ಅಂತ್ಯಜರೇ ಕಡೆಯಾಗಿ ಎಲ್ಲಾ ವರ್ಣದವರನ್ನೂ ನಾನು ಒಂದೇ ಎಂದು ತಿಳಿಯುವೆನು. ಶಿವಭಕ್ತಿಯಿಲ್ಲದ ಹಾರುವ ಮೊದಲುಗೊಂಡು ಹೊಲೆಯರ ವರೆಗಿನವರನ್ನೆಲ್ಲ ಭವಿಗಳೆಂದು ನಾನು ಒಂದೇಯಾಗಿ ಭಾವಿಸುತ್ತೇನೆ. ಈ ಪ್ರಕಾರ ನಾನು ನಂಬುವುದರಲ್ಲಿ ಎಳ್ಳು ಮೊನೆಯಷ್ಟಾದರೂ ನನ್ನಲ್ಲಿ ಸಂದೇಹವುಂಟಾದರೆ ಆ ದಿನವೇ ನನಗೆ ನಾನಾ ದುಃಖಗಳನ್ನೂ, ಅವಮಾನಗಳನ್ನೂ ನೀನು ಉಂಟುಮಾಡು."

**(೨೭) ಆರಾಧ್ಯ ಪ್ರಾಣಲಿಂಗವೆಂದರಿದು | ಪೂರ್ವಗುಣವಳಿದು ಪುನರ್ಜಾತನಾದ ಬಳಿಕ | ಸಂಸಾರಬಂಧುಗಳಿನ್ನವರೆಂದರೆ ನಂಟುಭಕ್ತಿ ನಾಯಕನರಕ | ಇಂತೆಂದುದು ಕೂಡಲಸಂಗನ ವಚನ || ಭಕ್ತಸ್ಥಳ ೮೯**

**ವಿವರಣೆ**- ರಕ್ತ ಸಂಬಂಧಿಗಳು ನಿಜವಾದ ಸಂಬಂಧಿಗಳಲ್ಲ ಆಚಾರ ಗುಣಶೀಲಗಳು ಸಮಾನವಾಗಿರುವವರೇ ನಿಜವಾದ ಸಂಬಂಧಿಗಳಾಗುತ್ತಾರೆ. ಅವರು ಯಾವ ದೇಶ-ವರ್ಣಾದಿಗಳಲ್ಲಿ ಹುಟ್ಟಿದವರಿದ್ದರೂ ಅಡ್ಡಿಯಿಲ್ಲ. ಒಂದೇ ಮನೆಯಲ್ಲಿ ವಾಸವಾಗಿರುತ್ತಾರೆಂತಲೂ, ಒಂದೇ ರಕ್ತದಿಂದ ಹುಟ್ಟಿರುತ್ತಾರೆಂತಲೂ ಬಂಧುಬಾಂಧವರಾಗುವುದಾದರೆ, ಮನೆಯಲ್ಲಿ ವಾಸವಾಗಿರುವ ಇಲಿ-ಹೆಗ್ಗಣಗಳೂ, ಮೈಯಲ್ಲಿ ಹುಟ್ಟುವ ಹೇನು-ಕೂರೆಗಳೂ ಬಂಧುವರ್ಗಕ್ಕೆ ಸೇರಬೇಕಾದೀತು. ಆದಕಾರಣ ಶಿವಮತತತ್ವಗಳು ಮಾನ್ಯವಾಗಿ ಅವುಗಳನ್ನೇ ಆಚರಿಸಿ ಕೃತಾರ್ಥನಾಗಬೇಕೆಂದು ಯಾವ ಕುಲ ದೇಶಗಳಲ್ಲಿ ಹುಟ್ಟಿದವನಾಗಿದ್ದರೂ ಆತನು ಅವುಗಳನ್ನೆಲ್ಲಾ ಬಿಟ್ಟು, ವೀರಶೈವ ಮತದೀಕ್ಷೆಯನ್ನು ಹೊಂದಿದ ನಂತರ ಹಿಂದಿನ ಕುಲ-ಜಾತಿಗಳನ್ನು ಸ್ವಪ್ನದಲ್ಲಿಯು ಕೂಡಾ ಸ್ಮರಿಸಬಾರದು. ನಾನು ಹುಟ್ಟಿದ ಮನೆಯೆಂದೂ ಹೆತ್ತ ತಾಯಿ-ತಂದೆಗಳೆಂದೂ ಹಿಂದಿನ ಸ್ಮರಣೆಯನ್ನು ಮಾಡುವಾತನು ವೀರಶೈವ ಮತದ ಆಚಾರಶೀಲಗಳಿಗೆ ಮೋಹಿಸಿ, ಇವುಗಳನ್ನು ಆಶ್ರಯಿಸಲಿಲ್ಲವೆಂದೇ ತಿಳಿಯಬೇಕು. ಇಂಥ ಸಂಸಾರ ಮೋಹಿಯು ಶಿವದೀಕ್ಷೆ ಹೊಂದಿದರೂ ವ್ಯರ್ಥವೇ ಸರಿ. ಶಿವದೀಕ್ಷೆಯನ್ನು ಹೊಂದಿ, ಲಿಂಗಧಾರಣವಾದ ನಂತರ 'ಮಾತಾಗೌರೀ ಪಿತಾರುದ್ರ ಈಶ್ವರಃ ಕುಲಮೇವಚ | ಬಾಂಧವಾ ಶಿವಭಕ್ತಾಶ್ಚ ಸ್ವದೇಶೋ ಭುವನತ್ರಯಮ್ ||' ಎಂಬ ವಾತುಲ ತಂತ್ರೋಕ್ತಿಯಂತೆ ಪಾರ್ವತಿಯೇ ತಾಯಿಯೆಂತಲೂ, ಪರಮೇಶ್ವರನೇ ತಂದೆಯೆಂತಲೂ, ತಾನು ಶಿವವಂಶಜನೆಂತಲೂ, ಶಿವಭಕ್ತರೆಲ್ಲಾ ತನ್ನ ಬಾಂಧವರೆಂತಲೂ, ಮೂರು ಲೋಕಗಳೇ ತನ್ನ ಸ್ವದೇಶವೆಂತಲೂ ತಿಳಿಯಬೇಕೇ ವಿನಾ ಹಿಂದಣ ವಂಶಾದಿಗಳನ್ನು ಹೇಳಕೂಡದು. ಅನಾದಿ ವೀರಶೈವ ಸಾರಸಂಗ್ರಹ ಗ್ರಂಥದಲ್ಲಿ ಉದಾಹರಿಸಲ್ಪಟ್ಟಿರುವ ಸ್ಕಾಂದ ಪುರಾಣದ 'ಪ್ರಾಗ್ದೇಶ ಜಾತಿ ನಾಮಾನಿ ಯಃಪತೇತ್ಕಥಯೇಚ್ಚಸಃ | ಪ್ರಾಯಶ್ಚಿತ್ತ ಕ್ರಿಯಾನರ್ಹಃ ಪತೇತ್ಸಮಯಶಾಸನಾತ್ ||' (೨೩-೨೮೮) ಈ ವಾಕ್ಯವಾದರೂ 'ಶಿವದೀಕ್ಷೆಯನ್ನು ಹೊಂದಿದ ನಂತರ ಹಿಂದಣ ದೇಶ-ಜಾತಿ-ಹೆಸರುಗಳನ್ನು ಕೂಡಾ ಹೇಳಬಾರದು; ಹಾಗೆ ಹೇಳಿದ್ದಾದರೆ ಬರುವ ಪಾಪವು ಯಾವ ಪ್ರಾಯಶ್ಚಿತ್ತದಿಂದಲೂ ನಿವಾರಣೆಯಾಗುವುದಿಲ್ಲ'ವೆಂದೇ ಹೇಳುತ್ತದೆ. ಆದಕಾರಣ ಈ ತತ್ವವೇ ಈ ವಚನದಲ್ಲಿ ವಿವರಿಸಲ್ಪಟ್ಟಿದೆ.

"ತಾನು ಮೊದಲು ಆಚರಿಸುತ್ತಿದ್ದ ಆಚಾರಗಳ ವಿಷಯದಲ್ಲಿ ತನಗೆ ಆದರವಿಲ್ಲದೆ ವೀರಶೈವ ಮತತತ್ವಗಳಲ್ಲಿ ಆದರವುಂಟಾಗಿ ತನ್ನ ಮೊದಲಿನ ಗುಣಗಳನ್ನು ಬಿಟ್ಟು, ವೀರಶೈವ ಮತತತ್ವವನ್ನರಿತ ಗುರುವಿನಿಂದ ದೀಕ್ಷೆಯನ್ನು

ಹೊಂದಿ, ಪುನಃ ಜನ್ಮವನ್ನೇ ಎತ್ತಿದವನಂತೆ ಹೊಸಬನಾಗಿ, ತನ್ನ ಪ್ರಾಣವನ್ನೇ ಇಷ್ಟಲಿಂಗವನ್ನಾಗಿ ಪೂಜಿಸಲು ಪ್ರಾರಂಭಿಸಿದ ನಂತರ ಹಿಂದಿನ ಕುಲದ ಬಂಧು ಬಾಂಧವರನ್ನು ನೆನೆಸಿದರೆ ಆತನಿಗೆ ಘೋರ ನರಕವೇ ವಿನಾ ಅನ್ಯ ಗತಿಯಿಲ್ಲ."

**(೭೮) ಕೊಲ್ಲುವನೆ ಮಾದಿಗನು । ಹೊಲಸುತಿಂಬುವನೆ ಹೊಲೆಯ । ಕುಲವೇನೋ ಅವಂದಿರ ಕುಲವೇನೋ । ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜರು ॥**

**ಮಹೇಶಸ್ಥಳ ೬೫**

**ವಿವರಣೆ**- ಯಾವ ಪ್ರಾಣಿಯನ್ನೂ ಯಾವ ನಿಮಿತ್ತದಿಂದಲೂ ಕೊಲ್ಲದೆ, ಮದ್ಯ-ಮಾಂಸಾದಿ ಮಾದಕ ಮತ್ತು ನಿಷಿದ್ಧ ಪದಾರ್ಥಗಳನ್ನು ಯಾವ ನಿಮಿತ್ತದಿಂದಲೂ ಸೇವಿಸದೆ, ಎಲ್ಲಾ ಪ್ರಾಣಿಗಳ ಹಿತಾರ್ಥವಾಗಿ ಪ್ರಯತ್ನಿಸುತ್ತಿರುವ ಮಹಾತ್ಮರೇ ಶ್ರೇಷ್ಠಕುಲದವರೆಂತಲೂ ಅವರು ಯಾವ ಕುಲದಲ್ಲಿ ಹುಟ್ಟಿದವರಾಗಿದ್ದರೂ ಕಡಿಮೆಯವರಲ್ಲವೆಂತಲೂ ಈ ವಚನದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ.

"ಪ್ರಾಣಿಗಳನ್ನು ಕೊಲ್ಲುವಾತನು ಮಾದಿಗನೇ ವಿನಾ ಮಾದಿಗರ ಕುಲದಲ್ಲಿ ಹುಟ್ಟಿದ ಮಾತ್ರದಿಂದ ಮಾದಿಗನಾಗುವುದಿಲ್ಲ. ಮದ್ಯ ಮಾಂಸ ವಿ ಹೊಲಸು ಪದಾರ್ಥಗಳನ್ನು ಸೇವಿಸುತ್ತಿರುವವನೇ ಹೊಲೆಯನು. ಆತನು ಎಂಥ ವರ್ಣದವರಲ್ಲಿ ಹುಟ್ಟಿದ್ದರೂ ಅಡ್ಡಿ ಇಲ್ಲ. ಆದಕಾರಣ ವೃಥಾ ಕುಲಾಭಿಮಾನವನ್ನೇಕೆ ಹೇಳುವಿರಿ? ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುತ್ತಿರುವ ನಮ್ಮ ಶಿವಶರಣರೇ ಶ್ರೇಷ್ಠ ಕುಲದವರು."

**ಆದಿ ಪುರಾಣ ಅಸುರರಿಗೆ ಮಾರಿ । ವೇದಪುರಾಣ ಹೋತಂಗೆ ಮಾರಿ । ರಾಮಪುರಾಣ ರಕ್ಕಸರಿಗೆ ಮಾರಿ । ಭಾರತಪುರಾಣ ಗೋತ್ರಕ್ಕೆ ಮಾರಿ । ಎಲ್ಲಾ ಪುರಾಣ ಕರ್ಮಕ್ಕೆ ಮೊದಲು । ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲ ಕೂಡಲ ಸಂಗಮದೇವ ॥** **ಮಹೇಶಸ್ಥಳ ೪೫.**

**ವಿವರಣೆ**- ಎಲ್ಲರ ಮಹಿಮೆಗಳನ್ನು ಪುರಾಣಾದಿ ಪ್ರಾಚೀನ ಗ್ರಂಥಗಳಲ್ಲಿ ನೋಡಿದರೆ ಅವು ಹಿಂಸಾಯುಕ್ತವಾದವುಗಳಾಗಿಯೇ ತೋರುತ್ತವೆ. ಆದರೆ ವೀರಶೈವ ಮಹಾನುಭಾವರು ಅಹಿಂಸಾ ವ್ರತದಿಂದಲೇ ಆತ್ಮಬಲವುಳ್ಳವರಾಗಿ ಮಹಾ ಮಹಿಮಾಶಾಲಿಗಳಾದುದರಿಂದ ಇವರ ಚಾರಿತ್ರ್ಯವೇ ಪರಮ ಪವಿತ್ರವಾದುದೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ವೇದಕಾಲದ ಆದಿ ವೃತ್ತಾಂತಗಳೆಲ್ಲ ದೇವದಾನವರ ಯುದ್ಧದಿಂ ಕೂಡಿರುವ ಪ್ರಯುಕ್ತ ಆಗಿನ ಕೃತಿಗಳು ಅಸುರರಿಗೆ ಮಾರಿಯಾಗಿಯೇ ಇದ್ದವು ವೇದಗಳ ಮಧ್ಯಕಾಲದಲ್ಲಾದರೋ ಪ್ರಾಣಿಗಳ ಹಿಂಸೆಯೇ ಮುಖ್ಯವಾಗಿ ಪ ಣಮಿಸಿ, ಯಜ್ಞಗಳ ನಿಮಿತ್ತವಾಗಿ ಹೋತಗಳ ಸಂಹಾರವಾಗುತ್ತಿದ್ದಿತು. ಶ್ರೀ ರಾಮಚಂದ್ರನ ಕಾಲದಲ್ಲಾದರೂ ರಾವಣಾದಿ ರಾಕ್ಷಸರ ಸಂಹಾರವೇ ಮುಖ್ಯ ಸಂಗತಿಯಾಗಿದ್ದಿತು ಭಾರತ ಪುರಾಣವಂತೂ ಒಂದೇ ಗೋತ್ರದವರಾದ ಕೌರವ-ಪಾಂಡವರ ಯುದ್ಧದಿಂದಲೇ ಕೂಡಿದ್ದಾಗಿದೆ. ಈ ಪ್ರಕಾರ ಎಲ್ಲಾ ಪುರಾಣಗಳು ಹಿಂಸಾಮಯವಾದ ಕರ್ಮಗಳಿಂದಲೇ ಕೂಡಿವೆ. ಆದರೆ ಸರ್ವ ಜೀವಿದಯಾಪರರಾದ ಶಿವಶರಣರ ಮಹಿಮೆಗಳು, ಅಹಿಂಸಾಮಯವಾದವುಗ ಳಾದುದರಿಂದ ಇವರ ಪುರಾಣಕ್ಕೆ ಸಮಾನವಾದ ಪುರಾಣಗಳಾವುವೂ ಇಲ್ಲ."

**(೬೦) ಮಾತಿನ ಮಾತಿಂಗೆ ನಿನ್ನ ಕೊಂದಾರೆಂದು ಎಲೆ ಹೋತೇ ಅಳುಕಂಡ್ಯಾ | ವೇದವನೋದಿದವರ ಮುಂದೆ ಅಳುಕಂಡ್ಯಾ | ಶಾಸ್ತ್ರವ ನೋದಿದವರ ಮುಂದೆ ಅಳುಕಂಡ್ಯಾ | ನೀನತ್ತುದಕೆ ತಕ್ಕುದ ಮಾಡುವ ಕೂಡಲ ಸಂಗಮದೇವನವರ ||** ಮಹೇಶಸ್ಥಳ ೪೭

**ವಿವರಣೆ-** ವೈದಿಕ ಮತಗಳಲ್ಲಿ ಯಾವ ಪ್ರಾಣಿಯನ್ನೂ ಕೊಲ್ಲಕೂಡ ದೆಂಬ ಅಹಿಂಸಾ ವ್ರತವು ಪ್ರತಿಪಾದಿಸಲ್ಪಟ್ಟಿದ್ದರೂ ಯಜ್ಞಗಳಲ್ಲಿ ಮಾಡುವ ಪಶು ಹಿಂಸೆಯು ಹಿಂಸೆಯಲ್ಲವೆಂದು ಅನೇಕರು ತಿಳಿದುಕೊಂಡಿದ್ದಾರೆ ಈ ತಪ್ಪು ತಿಳುವಳಿಕೆಯನ್ನು ಈ ವಚನದಲ್ಲಿ ನಿಷೇಧಿಸಿ, ಯಜ್ಞಗಳಲ್ಲಿ ಕೂಡಾ ಪಶುಗಳನ್ನು ಕೊಲ್ಲಕೂಡದೆಂದು ಪ್ರತಿಪಾದಿಸಿದ್ದಾರೆ.

"ಯಜ್ಞಗಳಲ್ಲಿ ಕೊಲ್ಲಲ್ಪಡುತ್ತಿರುವ ಎಲೈ ಹೋತವೇ, ಗುರುಹಿರಿ ಯರು ಹೇಳುತ್ತಾರೆಂದು ಅವರ ಮಾತನ್ನು ಕೇಳಿ ನಿನ್ನನ್ನು ಕೊಲ್ಲುತ್ತಿದ್ದರೆ ಅವರ ಮುಂದೆ ಹೋಗಿ ನೀನು ಅಳು. ನಿನ್ನನ್ನು ಯಜ್ಞದಲ್ಲಿ ಕೊಲ್ಲಬೇಕೆಂದು ವೇದಗಳಲ್ಲಿ ಹೇಳಿರುವುದಾಗಿ ವೇದ-ಮಂತ್ರಗಳ ಅರ್ಥವನ್ನು ವಿವರಿಸುತ್ತಿರುವವರ ಮುಂದೆ ಹೋಗಿ ನೀನು ಅಳು. ಪಶುಗಳನ್ನು ಕೊಂದು ಯಜ್ಞಮಾಡುವುದು ಶಾಸ್ತ್ರಸಮ್ಮತವಾದುದೆಂದು ಶಾಸ್ತ್ರಾಧಾರಗಳನ್ನು ತೋರಿಸುತ್ತಾ ವಾದಿಸುವವರ ಮುಂದೆ ಹೋಗಿ ನೀನು ಅಳು. ಏಕೆಂದರೆ, ದಯಾಸಾಗರನಾದ ಲಿಂಗದೇವನು ನಿನ್ನ ಗೋಳನ್ನು ಕೇಳಿ ನಿನ್ನನ್ನು ಕೊಂದವರಿಗೂ ಕೊಲಿಸಿದವರಿಗೂ ತಕ್ಕ ಶಿಕ್ಷೆ ಯನ್ನು ವಿಧಿಸುವನು."

# ೬ ನೆಯ ಅಧ್ಯಾಯ.



**(೬೧) ಅತ್ತಿತ್ತ ಹೋಗದಂತೆ ಹೆಳವನ ಮಾಡಿಸು ತಂದೆ | ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ | ಮತ್ತೊಂದಕೇಳ ದಂತೆ ಕಿವುಡನ ಮಾಡಯ್ಯ ತಂದೆ | ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಿಸದಂತೆ ಇರಿಸು ಕೂಡಲ ಸಂಗಮದೇವ || ಭಕ್ತಸ್ಥಳ ೫೯**

ವಿವರಣೆ- ಕಣ್ಣು, ಕಿವಿ ಮೊದಲಾದ ಜ್ಞಾನೇಂದ್ರಿಯಗಳೂ, ಕೈ ಕಾಲು ಮೊದಲಾದ ಕರ್ಮೇಂದ್ರಿಯಗಳೂ, ಆತ್ಮೋನ್ನತಿಗೆ ಸಾಧನವಾದ ಪುಣ್ಯ ಕಾರ್ಯಗಳಲ್ಲಿ ಹೋಗುತ್ತಿರಬೇಕೇ ವಿನಾ ತನಗೆ ಅಹಿತವನ್ನು ಮಾಡಿ ಅನ್ಯರಿಗೂ ಕೇಡನ್ನುಂಟುಮಾಡುತ್ತಿರುವಂಥ ದುಷ್ಟ ಕಾರ್ಯಗಳಲ್ಲಿ ಹೋಗುತ್ತಿರಬಾರದು. ಅಂಥ ಪ್ರಸಂಗ ಬಂದರೆ ಆ ದುಷ್ಟ ಕಾರ್ಯದಲ್ಲಿ ಹೋದ ಇಂದ್ರಿಯವು ತಾನೇ ಕೆಡುವುದಲ್ಲದೆ, ಇಡೀ ದೇಹವನ್ನೇ ಹಾಳುಮಾಡುವಪ್ರಯುಕ್ತ ಆ ಇಂದ್ರಿಯ ವೊಂದೇ ನಷ್ಟವಾಗುವದೊಳ್ಳೆಯದಲ್ಲವೇ? ಪರಧನ ಮತ್ತು ಪರಸ್ತ್ರೀಯರನ್ನು ಕೈಗಳು ಮುಟ್ಟಿ ಇಡೀ ದೇಹವನ್ನೇ ಪಾಪದಲ್ಲಿ ತಳ್ಳುವುದಕ್ಕಿಂತಲೂ ಆ ಕೈಗಳೇ ಇಲ್ಲದಂತಾಗುವುದು ದೇಹಕ್ಕೆ ಕ್ಷೇಮಕರವಲ್ಲವೇ? ಆದಕಾರಣ ದುಷ್ಟ ಕಾರ್ಯ ಗಳಲ್ಲಿ ಹೋಗುವ ಇಂದ್ರಿಯಗಳು ಅವು ಇಲ್ಲದೆ ಇರುವುದಕ್ಕಿಂತಲೂ ಹೆಚ್ಚಿನ ಅನರ್ಥವನ್ನುಂಟುಮಾಡುತ್ತವೆಂಬ ತತ್ವವನ್ನು ಈ ವಚನದಲ್ಲಿ ಪ್ರತಿಪಾದಿ ಸಿದ್ದಾರೆ.

"ದುಷ್ಟ ಕಾರ್ಯಗಳಿಗೆ ಹೋಗಬೇಕೆಂಬ ಅಪೇಕ್ಷೆಯುಂಟಾದರೆ ಆಗ ಅತ್ತಿತ್ತ ಹೋಗಲು ನನ್ನ ಕಾಲುಗಳು ಏಳದಂತಾಗಲಿ. ಪರಧನ, ಪರಸ್ತ್ರೀ ಮೊದಲಾದವುಗಳನ್ನು ಅಪಹರಿಸಬೇಕೆಂಬ ಬುದ್ಧಿಯಿಂದ ಅವುಗಳನ್ನು ನೋಡು ವ ಇಚ್ಛೆಯುಂಟಾದರೆ ಆಗ ನನ್ನ ಕಣ್ಣುಗಳೇ ಕಾಣದಂತಾಗಲಿ. ಶಿವಭಜನೆ ಮತ್ತು ಆತ್ಮೋನ್ನತಿಯ ಸದುಪದೇಶ ಸದ್ಭಾಷಣಗಳಲ್ಲದೆ, ಅನ್ಯ ಅಪ ಶಬ್ದಗಳು ನನ್ನ ಕಿವಿಯಮೇಲೆ ಬಿದ್ದರೆ, ಆಗ ನನ್ನ ಕಿವಿಗಳೇ ಕೇಳಿಸದಂತಾಗಲಿ. ಈ ಭೂಮಿಗೆ ನನ್ನನ್ನು ತಂದಿರುವ ತಂದೆಯಾದ ಶಿವನೇ, ನನ್ನ ಮನಸ್ಸು ನಿನಗೆ ಶರಣಾಗತರಾಗಿರುವ ಶಿವಶರಣರ ಪಾದಸ್ಮರಣೆಯ ವಿನಾ ಅನ್ಯ ವಿಷಯಗಳ ಕಡೆಗೆ ಹೋಗದಂತೆ ಮಾಡು."

**(೮೨) ಮರಮಥನದಿಂದ ಅಗ್ನಿಹುಟ್ಟಿ ಆ ಮರನೆಲ್ಲವ ಸುಡದಿರ್ಪುದೆ? ಮಹಾನುಭಾವರ ಸಂಗದಿಂದ ಜ್ಞಾನಾಗ್ನಿ ಹುಟ್ಟಿ ಎನ್ನ ತನು ಗುಣಂಗಳೆಲ್ಲವ ಸುಡದಿರ್ಪುದೇ? ಇದುಕಾರಣ ಮಹಾನುಭಾವರ ತೋರಿಸು ಕೂಡಲ ಸಂಗಮದೇವ ||** ಶರಣಸ್ಥಳ ೨೯.

**ವಿವರಣೆ-** ಮನುಷ್ಯನು ಸದ್ಗುಣ ಸದಾಚಾರಗಳುಳ್ಳವನಾಗಲು ಅನೇಕ ಸಾಧನಗಳಿವೆಯಷ್ಟೆ. ಅವುಗಳಲ್ಲಿ ಪವಿತ್ರಾಚರಣೆಯುಳ್ಳ ಮಹಾತ್ಮರ ಸಹವಾಸವು ಒಂದು ಮುಖ್ಯ ಸಾಧನವಾಗಿದೆ. ಮನಸ್ಸು, ನುಡಿ ಮತ್ತು ನಡೆ ಇವು ಮೂರು ಒಂದೇ ರೀತಿಯಲ್ಲಿ ಪರಿಶುದ್ಧವಾಗಿರತಕ್ಕ ಮಹಾನುಭಾವರ ಸಹವಾಸವೂ ಮನುಷ್ಯರ ಸುಧಾರಣೆಗೆ ಹೆಚ್ಚು ಪರಿಣಾಮಕಾರಿಯಾದದಾಗಿರುವುದರಿಂದ ಅಂಥ ಸಹವಾಸದ ಮಹತ್ವವನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ಅಡವಿಯಲ್ಲಿ ಕೂಡಿ ಇರುವ ಮರಗಳು ಗಾಳಿಯಿಂದ ಒಂದಕ್ಕೊಂದು ತಿಕ್ಕಿದ ನಂತರ ಆ ಘರ್ಷಣದಿಂದ ಅಲ್ಲಿ ಬೆಂಕಿ ಹುಟ್ಟಿ ಆ ಮರಗಳು ಹೇಗೆ ಸುಟ್ಟು ಹೋಗುತ್ತವೆಯೋ, ಹಾಗೆಯೇ ಆತ್ಮಜ್ಞರಾದ ಮಹಾನುಭಾವರ ಸಹವಾಸದಲ್ಲಿದ್ದರೆ ಅವರ ದರ್ಶನ, ಸಂಭಾಷಣೆ ಮತ್ತು ಉಪದೇಶಗಳೆಂಬ ಘರ್ಷಣದಿಂದ ಜ್ಞಾನವೆಂಬ ಅಗ್ನಿ ಹುಟ್ಟಿ ನಾನಾ ವಿಷಯಗಳನ್ನನುಭವಿಸಬೇಕೆಂಬ ಅಂಗಗುಣಗಳೆಲ್ಲಾ ಸುಟ್ಟುಹೋಗಿ, ಕೇವಲ ಸುಖ-ಶಾಂತಿಮಯವಾದ ಲಿಂಗಗುಣಗಳು ಎಂದರೆ ಆತ್ಮಗುಣಗಳುಂಟಾಗುವುದರಿಂದ ಅಂಥ ಲಿಂಗಾಂಗ ಸಾಮರಸ್ಯ ಜ್ಞಾನವುಳ್ಳ ಮಹಾನುಭಾವರನ್ನು ನನಗೆ ತೋರಿಸಿ, ಅವರ ಸಹವಾಸದಲ್ಲಿಯೇ ಇರುವಂತೆ ಲಿಂಗದೇವನೇ ನನಗೆ ಅನುಗ್ರಹಿಸು."

**(೮೩) ಅರ್ಥಕ್ಕೆ ತಪ್ಪಿದರೇನು? ಪ್ರಾಣಕ್ಕೆ ತಪ್ಪಿದರೇನು? ಅಭಿಮಾನಕ್ಕೆ ತಪ್ಪಿದರೇನು? ಶರಣರು ಶರಣರಲ್ಲಿ ಗುಣವನರಸುವರೆ? ಕೂಡಲ ಸಂಗನ ಶರಣರು ನೊಂದರೆ ಸೈರಿಸಬೇಕು ||** ಭಕ್ತಸ್ಥಳ ೨೮೮

**ವಿವರಣೆ-** ಅಹಿತ ಮಾಡಿದವರಿಗೆ ಅಹಿತ ಮಾಡುವುದು ಅನ್ಯಾಯವೇನೂ ಅಲ್ಲವೆಂದು ಕೆಲವರ ಮತವು. ಅಹಿತಮಾಡಿದವರಿಗೆ ಕೂಡಾ ಅಹಿತ ಮಾಡದೆ ಹಿತಮಾಡುವುದೇ ನ್ಯಾಯವೆಂದು ಕೆಲವರ ಮತವು. ನೀತಿಶಾಸ್ತ್ರದಲ್ಲಿ ಆ ಉಭಯ ತತ್ವಗಳೂ ಪ್ರತಿಪಾದಿಸಲ್ಪಟ್ಟಿವೆ. ಈ ಮಹಾನುಭಾವರಾದರೋ ಶಿವಶರಣರಿಂದ ನಮಗೆ ಅಹಿತ ಸಂಭವಿಸಿದರೆ ಅದು ಪರಿಣಾಮದಲ್ಲಿ ಹಿತಕ್ಕಾಗಿ ಶಿವನಾಜ್ಞೆಯಿಂದಲೇ ಪ್ರಾಪ್ತವಾದುದೆಂದು ನಂಬಿ ಅವರಿಗೆ ಹಿತವನ್ನೇ ಮಾಡ

ಬೇಕೆಂಬ ಪಂಥದವರಾಗಿರುವುದರಿಂದ ಈ ವಚನದಲ್ಲಿ ಶಿವಶರಣರು ಎಂಥ ಸ್ಥೈರಣೆಯುಳ್ಳವರಾಗಿರಬೇಕೆಂಬುದನ್ನು ವಿವರಿಸಿದ್ದಾರೆ.

"ಶಿವಶರಣರು ತಮ್ಮ ಧನಧಾನ್ಯಾದಿಗಳು ಸೂರೆಹೋದರಾಗಲಿ, ತಮ್ಮ ಪ್ರಾಣಕ್ಕೇನೇ ಅಪಾಯ ಉಂಟಾದರಾಗಲೀ ತಮ್ಮ ಅಭಿಮಾನಕ್ಕೆ ಕೊರತೆ ಬಂದರಾಗಲೀ, ಅವು ಯಾರಿಂದ ಪ್ರಾಪ್ತವಾಗಿರುತ್ತವೆಯೋ ಆ ಶರಣರಲ್ಲಿಯ ಗುಣಗಳನ್ನು ಎತ್ತಿ ಆಡದೆ, ತಾವು ನೊಂದರೂ ಸ್ಥೈರಿಸಿಕೊಳ್ಳಬೇಕು."

**(೪೪) ಭಕ್ತನು ಕಾಣದ ಠಾವಿನಲ್ಲಿ ಜರಿದರೆಂದರೆ ಕೇಳಿ ಪರಿಣಾಮಿಸಬೇಕು । ಅದೇನುಕಾರಣ? ಕೊಳ್ಳದೆ ಕೊಡದೆ ಅವರಿಗೆ ಸಂತೋಷವಹುದಾಗಿ । ಎನ್ನ ಮನದ ತದ್ವೇಷವಳಿದು ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸು ಕೂಡಲ ಸಂಗಮದೇವ ॥** ಭಕ್ತಸ್ಥಳ ೨೪೯.

ವಿವರಣೆ- ಭಕ್ತನು ಭಗವದ್ಭಕ್ತರಲ್ಲಿ ಕಿಂಕರಭಾವದಿಂದಲೇ ವರ್ತಿಸುತ್ತಿರುತ್ತಾನೆ. ಅಹಂಕಾರವು ಆತನಲ್ಲಿ ತಿಲಾಂಶವಾದರೂ ತಲೆದೋರುವುದಿಲ್ಲ. ಆದಕಾರಣ ಶಿವನಲ್ಲಿ ಭಕ್ತಿಯುಳ್ಳ ಶಿವಭಕ್ತರು, ಶಿವಶರಣರು ತಮ್ಮ ನಡೆ-ನುಡಿಗಳನ್ನು ಕುರಿತು ಎಷ್ಟೇ ಜರಿದರೂ ತಾವು ಕೋಪಿಸದೆ ಅವರಲ್ಲಿ ಕಿಂಕರತ್ವದಿಂದಲೇ ವರ್ತಿನಬೇಕೆಂಬ ನಿಜಭಕ್ತರ ನಡತೆಯನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ನಮ್ಮ ಆಚಾರ-ವಿಚಾರಗಳನ್ನು ಕುರಿತು ಶಿವಶರಣರು ಜರಿದ ಸಂಗತಿಯು ನಮಗೆ ಗೊತ್ತಾದರೆ ಆಗ ಸಂತೋಷಪಡಬೇಕೇ ವಿನಾ ಆ ಜರಿದವರ ವಿಷಯದಲ್ಲಿ ಕೋಪಿಸಬಾರದು. ಏಕೆಂದರೆ, ನಾವು ಏನನ್ನೂ ಕೊಡದೆ ಯಾವ ಶ್ರಮವನ್ನೂ ವಹಿಸದೆ, ಜರಿಸಿಕೊಳ್ಳುವುದರಿಂದಲೇ ಆ ಜರಿದವರಿಗೆ ಸಂತೋಷವಾಗುತ್ತಿದ್ದರೆ ನಿರಾಯಾಸವಾಗಿಯೇ ಅವರಿಗೆ ಸಂತೋಷವನ್ನುಂಟುಮಾಡಿದಂತಾಗಲಿಲ್ಲವೇ? ಆದರಿಂದ ನಮಗಾಗುವ ನಷ್ಟಕಷ್ಟಗಳಾವುವು? ನನ್ನನ್ನು ಜರಿದವರ ವಿಷಯದಲ್ಲಿ ದ್ವೇಷವುಂಟಾಗದೆ ಆ ಶಿವಶರಣರಿಗೆ ಶರಣೆಂಬುವ ಕಿಂಕರ ಭಾವವನ್ನೇ ಲಿಂಗಮೂರ್ತಿಯೇ ನನಗೆ ದಯಪಾಲಿಸು."

**(೪೫) ಇರಿಸಿಕೊಂಡು ಭಕ್ತರಾದರೆಮ್ಮವರು । ಕರಿಸಿಕೊಂಡು ಭಕ್ತರಾದರೆಮ್ಮವರು । ಜರಿಸಿಕೊಂಡು ಭಕ್ತರಾದರೆಮ್ಮವರು । ಕೊರಿಸಿಕೊಂಡು ಭಕ್ತರಾದರೆಮ್ಮವರು ! ಕೂಡಲಸಂಗನ ಶರಣರಿಗೆ ಮುನಿಸತಾಳಿ । ಎನ್ನ ಭಕ್ತಿಯು ಅರೆಯಾಯಿತ್ತು ॥** ಭಕ್ತಸ್ಥಳ ೨೫೪

ವಿವರಣೆ- ಪರಮಾತ್ಮನಲ್ಲಿ ದೃಢವಾದ ಭಕ್ತಿಯುಳ್ಳವನು ಭಗವದ್ಭಕ್ತಿ ರಿಂದ ತನಗೆ ಎಂಥ ವಿಪತ್ತುಗಳು ಪ್ರಾಪ್ತವಾದರೂ ಅವು ತನ್ನ ಭಕ್ತಿಯ ಪರೀಕ್ಷೆಗಾಗಿಯೇ ಬಂದಿವೆಯೆಂದು ತಿಳಿದು, ಶಾಂತತೆಯಿಂದ ಅವುಗಳಿಗೆ ಎದೆಗೊಟ್ಟು ನಿಲ್ಲಬೇಕೇ ವಿನಾ ನ್ಯಾಯವಾದ ಮಾರ್ಗವನ್ನು ಎಂಥ ವಿಪತ್ತಿನಲ್ಲಿ ಕೂಡಾ ಬಿಡಕೂಡದು. ಇದೇ ಪ್ರಕಾರ ಅನೇಕ ಭಗವದ್ಭಕ್ತರು ಆಚರಿಸಿದ್ದಾರೆ. ಅವರಲ್ಲಿ ಕೆಲವು ಶಿವಶರಣರ ದೃಷ್ಟಾಂತಗಳನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ನೇದಿರಾಜಯ್ಯಗಳು ಶಸ್ತ್ರದಿಂದ ಇರಿಸಿಕೊಂಡು, ಮೊನೆವಿಡಿರಾಯರು ಕಠಾರಿಯಿಂದ ಹಿಂಸೆಪಡಿಸಿಕೊಂಡು ಸಿಂಧ ಮರಾಯರು ಗರಗಸದಿಂದ ಕೊರಿಸಿಕೊಂಡು, ತಿರುನೀಲಕಂಠರು ತಮ್ಮ ಪ್ರಾಮಾಣಿಕತನದ ಬಗ್ಗೆ ಹೀಯಾಳಿಸಿಕೊಂಡು ಶಿವನಲ್ಲಿರುವ ತಮ್ಮ ಅದ್ವಿತೀಯವಾದ ಭಕ್ತಿಯನ್ನು ವ್ಯಕ್ತಗೊಳಿಸಿದರು. ಶಿವಶರಣರಿಂದ ಬಂದಂಥ ಈ ಕಷ್ಟಗಳನ್ನೆಲ್ಲ ಶಾಂತಚಿತ್ತದಿಂದ ಸಹಿಸಿಕೊಂಡದ್ದರಿಂದಲೇ ಇವರು ನಿಜವಾದ ಭಕ್ತರಾದರು. ಆದರೆ ಕೋಪವನ್ನು ತಡೆಯತಕ್ಕ ಅಂಥ ಆತ್ಮಬಲದ ಶಾಂತತೆಯು ನನ್ನಲ್ಲಿಲ್ಲದ್ದರಿಂದ ಶಿವನೇ, ನನ್ನ ಭಕ್ತಿಯು ಅಪೂರ್ಣವಾದುದಾಯಿತು."

**(೮೬) ಜಂಬುದ್ವೀಪ ನವಖಂಡ ಪೃಥ್ವಿಯೊಳಗೆ ಎರಡಾಳಿನ ಭಾಷೆಯು ಕೇಳಿರಯ್ಯ | ಕೊಲುವೆನೆಂಬ ಭಾಷೆ ದೇವನದು | ಗೆಲುವೆನೆಂಬ ಭಾಷೆ ಭಕ್ತನದು | ಸತ್ಯವೆಂಬ ಕೂರಲಗನೆ ಕಳೆದುಕೊಂಡು ಸದ್ಭಕ್ತರು ಗೆದ್ದರು ಕೂಡಲ ಸಂಗಮದೇವ ||** ಭಕ್ತಸ್ಥಳ ೧೫೨

ವಿವರಣೆ-ಪರಮಾತ್ಮನಲ್ಲಿ ಅನನ್ಯ, ಅಸಾಧಾರಣವಾದ ಭಕ್ತಿಯುಳ್ಳ ಭಗವದ್ಭಕ್ತರಿಗೆ ಸತ್ಯವೇ ಬ್ರಹ್ಮಾಸ್ತ್ರವು. ಅವರ ಶೌರ್ಯವೆಲ್ಲಾ ತಾವು ಕೈಕೊಂಡ ಸತ್ಯವ್ರತವನ್ನು ಆಚರಿಸುವುದರಲ್ಲಿಯೇ ಇರುತ್ತದೆ. ಆದುದರಿಂದ ಅವರು ಪರಮ ಸತ್ಯಾಗ್ರಹಿಗಳಾಗಿರುತ್ತಾರೆ. ಇಂಥವರ ಸತ್ಯವ್ರತವನ್ನು ಭಂಗಗೊಳಿಸಬೇಕೆಂದು ಯಾರು ಎಷ್ಟು ಪ್ರಯತ್ನಿಸಿದರೂ ಕೊನೆಗೆ ಸತ್ಯಶೀಲರಾದ ಸತ್ಯಾಗ್ರಹಿಗಳಿಗೇನೇ ಜಯವು ಪ್ರಾಪ್ತವಾಗುವುದರಿಂದ ಈ ವಚನದಲ್ಲಿ ಸತ್ಯದ ಮಹತ್ವವನ್ನು ವಿವರಿಸಿದ್ದಾರೆ.

"ಜಂಬುದ್ವೀಪವೆಂಬ ಹೆಸರುಳ್ಳ ಈ ಭರತಖಂಡ ಮೊದಲಾದ ಪೃಥ್ವಿಯೊಳಗಿನ ಒಂಬತ್ತು ಖಂಡಗಳಲ್ಲಿಯೂ ಎರಡೇ ಭಾಷೆಗಳು ತೋರುತ್ತವೆ. ಪರಮಾತ್ಮನು ತನ್ನ ಭಕ್ತರ ಭಕ್ತಿಯನ್ನು ಪರೀಕ್ಷಿಸಿ ಅವರನ್ನು ಸೋಲಿಸುತ್ತೇ

ಂದು ಅವರಿಂಧ ನಾನಾ ಅಭಿವಚನಗಳನ್ನು ಹೊಂದುವುದೊಂದು ಭಾಷೆ. ಕ್ತರಾದರೋ ಎಂಥ ವಿಪತ್ತು ಅವರಿಂದ ಬಂದರೂ ಅದಕ್ಕೆ ಎದೆಗೊಟ್ಟು ನಿಂತು ಗೆಲ್ಲುತ್ತೇವೆಂಬುದು ಇನ್ನೊಂದು ಭಾಷೆ. ಪ್ರಪಂಚದ ಈ ಎರಡು ಭಾಷೆಗಳಲ್ಲಿ ಭಕ್ತರು ತಮ್ಮಲ್ಲಿರತಕ್ಕ ತೀಕ್ಷ್ಣತರವಾದ ಸತ್ಯವೆಂಬ ಶಸ್ತ್ರದಿಂದ ಭಕ್ತಿಯ ಪರೀಕ್ಷೆಗಾಗಿ ಬಂದಿರತಕ್ಕ ದೇವನ ಸಂಗಡ ಯುದ್ಧಮಾಡಿ, ಎಂದರೆ ಸತ್ಯದ ಬಲದಿಂದ ದೇವರನ್ನು ಸೋಲಿಸಿ, ಲಿಂಗದೇವನೇ, ತಾವೇ ಜಯಶೀಲ ರಾದರು "

**(೮೭) ಎನಿಸೆನಿಸೆಂದರೆಯೂ ನಾ ಧೃತಿಗೆಡೆನಯ್ಯ | ಎಲುದೋರಿ ದರೆ ನರ ಹರಿದರೆ, ಕರುಳು ಕುಪ್ಪಳಿಸಿದರೆ, ನಾ ಧೃತಿಗೆಡೆನಯ್ಯ | ಶಿರ ಹರಿದು ಅಟ್ಟೆ ನೆಲಕ್ಕೆ ಬಿದ್ದರೆ ಕೂಡಲ ಸಂಗನ ಶರಣರಿಗೆ ಶರಣು ಶರಣೆ ನುತಿದ್ದಿತಯ್ಯ ||** ಮಹೇಶಸ್ಥಳ ೧೬೭

**ವಿವರಣೆ**-ಹೇಡಿಯು ಭಗವದ್ಭಕ್ತನಾಗುವುದಿಲ್ಲ. ಭಕ್ತರ ವೇಷವನ್ನು ಹಾಕಿಕೊಂಡವರಲ್ಲಿ ಹೇಡಿತನವಿರಬಹುದೇ ವಿನಾ ನಿಜವಾದ ಭಕ್ತರಲ್ಲಿ ಅಧೈ ರ್ಯವಿರುವುದು ಸಾಧ್ಯವೇ ಇಲ್ಲ. ಅವರು ಧೈರ್ಯದ ಮೂರ್ತಿಗಳಾಗಿಯೇ ಇರುತ್ತಾರೆ. ಯಾವ ಕಾಲದಲ್ಲಿ ಎಂತಹ ವಿಪತ್ತುಗಳು ಬಂದರೂ ಅವುಗಳಿಗೆ ಎದೆಗೊಟ್ಟು ನಿಂತು ಫಲಾಫಲಗಳನ್ನು ಪರಮಾತ್ಮನಿಗರ್ಪಿಸುವವರೇ ನಿಜಭಕ್ತರು. ಈ ಮಹಾನುಭಾವರು ಅಂಥ ನಿಜ ಶಿವಭಕ್ತರಾದುದರಿಂದ ಈ ವಚನದಲ್ಲಿ ತಾವು ಶಿವಶರಣರ ಹತ್ತಿರ ಹೇಗೆ ನಡೆದುಕೊಳ್ಳುತ್ತೇವೆಂಬುದನ್ನು ಹೇಳಿದ್ದಾರೆ.

" ನನ್ನನ್ನು ಎಷ್ಟು ಜರಿದರೂ ನಾನು ಧೈರ್ಯಗುಂದುವುದಿಲ್ಲ. ಇಷ್ಟೇ ಅಲ್ಲ. ನನ್ನ ಎಲುವುಗಳು ಹೊರಗೆ ತೋರುವಷ್ಟು ನನ್ನನ್ನು ಕೃಶಗೊಳಿ ಸಿದರೂ, ನನ್ನ ನರಗಳನ್ನು ಹರಿದರೂ, ಕರುಳುಗಳನ್ನು ಕಿತ್ತಿದರೂ ನಾನು ಎದೆ ಗುಂದುವುದಿಲ್ಲ. ಇಷ್ಟೇಕೆ ! ನನ್ನ ಶಿರಸ್ಸನ್ನು ಕತ್ತರಿಸಿದರೂ ಭೂಮಿಯಮೇಲೆ ಬಿದ್ದ ಆ ನನ್ನ ನಾಲಿಗೆಯು ಶಿವಶರಣರಿಗೆ ಶರಣು ಶರಣೆಂದೇ ನುಡಿಯುವುದು."

**(೮೮) ನಾಳೆ ಬಪ್ಪುದು ನಮಗಿಂದೇ ಬರಲಿ | ಇಂದು ಬಪ್ಪುದು ನಮಗೀಗೇ ಬರಲಿ | ಇದಕಾರಂಜುವರು ? ಇದಕಾರಳುಕುವರು? ಜಾತಸ್ಯ ಮರಣಂಧ್ರುವಂ, ಎಂದುದಾಗಿ | ನಮ್ಮ ಕೂಡಲ ಸಂಗಮದೇವ ಬರೆದ ಬರಹವ ತಪ್ಪಿಸುವೆನೆಂದರೆ ಹರಿ ಬ್ರಹ್ಮಾದಿಗಳಿಗಳವಲ್ಲ||** ಮಹೇಶಸ್ಥಳ ೧೭೧

**ವಿವರಣೆ**-ಭಗವದ್ಭಕ್ತರು ಮರಣವನ್ನು ಹುಲ್ಲುಕಡ್ಡಿಗಿಂತಲೂ ಕಡೆಯಾಗಿ ಕಾಣುತ್ತಾರೆ. ವಿಷಯೋಪಭೋಗಿಯು ಮಾತ್ರ ಮರಣಕ್ಕೆ ಅಂಜುವನೆ ವಿನಾ ವಿಷಯತ್ಯಾಗಿಯಾದ ಆತ್ಮಾನಂದಲೋಲುಪ್ತನು ಈ ಜಡದೇಹವನ್ನು ಬಿಡಲೇಕೆ ಭಯಪಡುವನು ? ನಿಜವಾದ ಭಗವದ್ಭಕ್ತರಲ್ಲಿ ಎಂತಹ ಅಸಾಧಾರಣವಾದ ಆತ್ಮಬಲವಿರುತ್ತದೆಂಬುದು ಮಹಾನುಭಾವರ ಈ ವಚನದಿಂದ ವ್ಯಕ್ತವಾಗುತ್ತದೆ

" ನಾಳೆ ಬರತಕ್ಕ ಮರಣವು ಇಂದೇ ಬಂದರೂ ಅಡ್ಡಿಯಿಲ್ಲ. ಈ ದಿವಸ ಬರತಕ್ಕ ಮರಣವು ಈಗಲೇ ಬಂದರೂ ಅಡ್ಡಿಯಿಲ್ಲ. ಈ ಮರಣಕ್ಕೆ ಯಾರು ತಾನೇ ಅಂಜುವರು ? ಇದಕ್ಕೆ ಭಯಪಟ್ಟು ಯಾರು ತಾನೇ ಆಚರಿಸಿರುವರು ? ಹುಟ್ಟಿದವರಿಗೆ ಮರಣ ಸಂಭವಿಸುವುದು ಸ್ವಭಾವಸಿದ್ಧವಾದುದಾಗಿದೆ. ಯಾವ ಪ್ರಕಾರ ಸಂಭವಿಸಬೇಕೆಂದು ಲಿಂಗದೇವನು ವಿಧಿಸಿದ್ದಾನೆಯೋ ಅದನ್ನು ತಪ್ಪಿಸಲು ಹರಿ ಬ್ರಹ್ಮಾದಿಗಳಿಗು ಕೂಡಾ ಸಾಧ್ಯವಿಲ್ಲ. "

**(೮೯) ಅರು ಮುನಿದು ಎಮ್ಮನೇನು ಮಾಡುವರಯ್ಯ। ಊರು ಮುನಿದು ನಮ್ಮನೆಂತು ಮಾಡುವುದು ? ನಮ್ಮ ಕುನ್ನಿಗೆ ಕೂಸುಕೊಡಬೇಡ। ನಮ್ಮ ಸೊಣಗಂಗೆ ತಳಿಗೆಯಲ್ಲಿಕ್ಕಬೇಡ। ಆನೆಯ ಮೇಲೆ ಹೋಹನ ಶ್ವಾನ ಕಚ್ಚಬಲ್ಲುದೆ ? ನಮಗೆ ನಮ್ಮ ಕೂಡಲ ಸಂಗಯ್ಯ ಸುಳ್ಳಸ್ನಕ್ಕರ ॥**

ಮಹೇಶಸ್ಥಳ ೧೨೭

**ವಿವರಣೆ**-ಪರಮಾತ್ಮನಲ್ಲಿ ದೃಢ ವಿಶ್ವಾಸವುಳ್ಳ ಭಕ್ತರು ಯಾರ ಕೋಪತಾಪಗಳಿಗೂ ಅಂಜಿ ತಾವು ಸ್ವೀಕರಿಸಿದ ಸತ್ಯವ್ರತವನ್ನಾಚರಿಸಲು ಹಿಂಜರಿಯುವುದಿಲ್ಲ. ಅವರು ತಮ್ಮ ಸರ್ವಸ್ವವನ್ನೂ ಪರಮಾತ್ಮನಿಗೇನೇ ಸಮರ್ಪಿಸಿರುತ್ತಾರೆ. ಭಗವದ್ಭಕ್ತರಲ್ಲಿ ಪರಮಾತ್ಮನ ವಿಷಯಕ್ಕೆ ಎಂಥ ನಿಷ್ಠೆಯಿರುತ್ತದೆಂಬುದು ಈ ವಚನದಿಂದ ವ್ಯಕ್ತವಾಗುತ್ತದೆ.

" ರಾಜರೇ ಮೊದಲಾದ ಎಂಥ ಬಲಶಾಲಿಗಳು ನಮ್ಮ ಮೇಲೆ ಕೋಪಿಸಿದರೂ ನಮಗೇನು ಮಾಡುವರು ? ಊರಜನರೆಲ್ಲರೂ ನಮ್ಮ ಮೇಲೆ ಸಿಟ್ಟಿದರೆ ಅವರು ನಮಗೇನು ಮಾಡುವರು ? ಇವರೆಲ್ಲರೂ ನಮ್ಮ ಮಗುವಿಗೆ ಹೆಣ್ಣನ್ನೇನೂ ಕೊಡಬೇಕಾದುದಿಲ್ಲ. ನಾವು ಸಾಕಿದ ನಾಯಿಗು ಕೂಡಾ ಅನ್ನವನ್ನು ಹಾಕಬೇಕಾದುದಿಲ್ಲ. ಲಿಂಗದೇವನ ಕೃಪೆಯೆಂಬ ಆನೆಯ ಮೇಲೆ ಹೋಗುತ್ತಿರುವವನಿಗೆ ವಿಷಯಲುಬ್ಧರಾದ ಇಂಥ ಜನಗಳೆಂಬ ನಾಯಿಗಳ ಕೋಪವು ಏನು ತಾನೆ ಮಾಡುವುದು.? "

**(೯೦) ನ್ಯಾಯ ನಿಷ್ಠುರ | ದಾಕ್ಷಿಣ್ಯ ಪರನಾನಲ್ಲ | ಲೋಕ ವಿರೋಧಿ | ಶರಣನಾರಾರಿಗು ಅಂಜುವವನಲ್ಲ | ಕೂಡಲ ಸಂಗಮದೇವರ ರಾಜತೇಜದೊಳಿರ್ಪನಾಗಿ||** ಮಹೇಶಸ್ಥಳ ೧೨೮

**ವಿವರಣೆ**-ಪರಮಾತ್ಮನಿಗೆ ಸರ್ವಸ್ವವನ್ನೂ ಸೂರೆಮಾಡಿದ ನಿಜಭಕ್ತರು ಲೋಕೋದ್ಧಾರದ ಪವಿತ್ರ ಕಾರ್ಯಗಳನ್ನು ಮಾಡುತ್ತಿರುವಾಗ ನ್ಯಾಯಪರವಾಗಿಯೇ ವರ್ತಿಸುತ್ತಿರುತ್ತಾರೆ ಭಯ-ದಾಕ್ಷಿಣ್ಯಾದಿಗಳಿಗೊಳಗಾಗಿ ಅನ್ಯಾಯದಿಂದ ಯಾವ ಕಾಲದಲ್ಲಿಯೂ ಸ್ವಲ್ಪವಾದರೂ ಆಚರಿಸುವುದಿಲ್ಲ. ಇಂಥ ಮಹಾತ್ಮರ ನಡೆ-ನುಡಿಗಳು ಲೌಕಿಕರಿಗೆ ವಿರೋಧವಾಗಿ ತೋರುತ್ತಿದ್ದರೂ ಅವರನ್ನು ಸಂತೋಷಗೊಳಿಸಬೇಕೆಂದು, ಇಲ್ಲವೆ ಅವರಿಂದ ಮಾನ ಮನ್ನಣೆಗಳನ್ನು ಹೊಂದಬೇಕೆಂದು ಮಹಾನುಭಾವರು ತಮ್ಮ ಸತ್ಯಾಚರಣೆಯನ್ನು ತಿಲಾಂಶವಾದರೂ ಬಿಡುವುದಿಲ್ಲ. ಜನಗಳ ದುಃಖದ ವಿಷಯದಲ್ಲಿ ಇವರ ಹೃದಯವು ಹೂವಿಗಿಂತ ಮೆತ್ತಗಿದ್ದರೂ, ಸತ್ಯದ ವಿಷಯದಲ್ಲಿ ಮಾತ್ರ ವಜ್ರಕ್ಕಿಂತಲೂ ಕಠಿಣತರವಾದುದಿರುತ್ತದೆಂಬುದು ಮಹಾನುಭಾವರ ಈ ವಚನದಿಂದ ವ್ಯಕ್ತವಾಗುತ್ತದೆ.

“ ಯಾವುದು ನ್ಯಾಯವಾದುದಾಗಿದೆಯೋ ಅದನ್ನೇ ನಡೆನುಡಿಗಳಲ್ಲಿ ತರಲು ನಾನು ನಿಷ್ಠುರ ಸ್ವಭಾವದವನಾಗಿದ್ದೇನೆ. ಈ ವಿಷಯದಲ್ಲಿ ಯಾರ ದಾಕ್ಷಿಣ್ಯಕ್ಕೂ, ಒಳಗಾಗತಕ್ಕವನಲ್ಲ. ಆದಕಾರಣ ನಾನು ಲೌಕಿಕರಿಗೆ ವಿರೋಧಿಯಾಗಿ ತೋರುವೆನು. ಶಿವನಿಗೆ ಶರಣಾಗತರಾದ ಶಿವಶರಣರು ಇಂಥ ಯಾವ ಜನರಿಗೂ ಅಂಜುವವರಲ್ಲ. ಏಕೆಂದರೆ ಅವರು ತಮಗೆ ರಾಜನಾದ ಲಿಂಗದೇವನ ಕೃಪಾಪ್ರಭೆಯಲ್ಲಿರುತ್ತಾರೆ.

**(೯೧) ಕಲಿಯಕೈಯ ಕೈದುವಿನಂತಿರಬೇಕಯ್ಯ | ಎಲುದೋರಿ ಸರಸವಾಡಿದರೆ ಸೈರಿಸಬೇಕಯ್ಯ | ರಣದಲ್ಲಿ ತಲೆಹರಿದು ಅಟ್ಟೆನೆಲಕ್ಕೆ ಬಿದ್ದು ಬೊಬ್ಬಿಡಲದಕೊಲಿವ ಕೂಡಲ ಸಂಗಮದೇವ ||** ಮಹೇಶಸ್ಥಳ ೧೨೮

**ವಿವರಣೆ**-ಧರ್ಮದ ಯುದ್ಧದಲ್ಲಿ ಸೇರುವವರು ಹೇಗಿರಬೇಕೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

ತಮಗೆ ವಿರೋಧಿಗಳಿಂದ ಎಂಥ ಹಿಂಸೆಗಳು ಪ್ರಾಪ್ತವಾದರೂ ಅವುಗಳನ್ನು ಶಾಂತಚಿತ್ತದಿಂದ ಸೈರಿಸಿಕೊಂಡು, ತಾವು ಸ್ವೀಕರಿಸಿದ ಆಚರಣೆಗಳನ್ನೇ ಆಚರಿಸುತ್ತಿರಬೇಕು. ಇಂಥ ಆತ್ಮವಿರರೇ ವೀರರು. ಇಷ್ಟು ಆತ್ಮಬಲವಿಲ್ಲದಿ

ದ್ದರೆ ವೈರಿಗಳ ಸಂಗಡ ತನ್ನ ಶಿರಸ್ಸು ರಣಭೂಮಿಯಲ್ಲಿ ಬೀಳುವವರೆಗೂ ಯುದ್ಧದಲ್ಲಿಯೇ ಮಗ್ನನಾಗಿರಬೇಕು ಈ ಉಭಯ ಮಾರ್ಗಗಳಲ್ಲಿ ಯಾವುದಾದರೂ ಒಂದನ್ನು ಅನುಸರಿಸಬೇಕೆ ವಿನಾ ಹೇಡಿಗಳಂತೆ ಜೀವ ವಾಶೆಗಾಗಿ ಧರ್ಮಯುದ್ಧ ವಿಮುಖನಾಗಬಾರದು.

“ ಶೂರನ ಕೈಯಲ್ಲಿರುವ ಕತ್ತಿಯಂತೆ ಪ್ರಕಾಶಮಯನಾಗಿರಬೇಕು ಎಲುವುಗಳು ಹೊರಗೆ ಬರುವಂತೆ ವಿರೋಧಿಗಳಿಂದ ಹಿಂಸೆಯುಂಟಾದರೂ ಸೈರಿಸಿಕೊಳ್ಳಬೇಕು. ಯುದ್ಧ ಭೂಮಿಯಲ್ಲಿ ಶಿರಸ್ಸು ಭೂಮಿಗೆ ಬಿದ್ದರೂ ನಾಲಿಗೆಯು ಜಯಧ್ವನಿಯನ್ನು ಮಾಡುತ್ತಿದ್ದರೆ ಮಾತ್ರ ಲಿಂಗದೇವನು ಮೆಚ್ಚುವನೇ ವಿನಾ, ಜೀವದಾಶೆಯಿಂದ ಓಡಿಹೋಗುವ ಹೇಡಿಗೆ ಶಿವನು ಒಲಿಯುವದಿಲ್ಲ ”

**(೯೨) ಅರ್ಥವನರ್ಥವಮಾಡಿ ಕೋಳಾಹಳಂ ಗೈಯುತ್ತಿರಲಿ | ಹುಟ್ಟಿದಮಕ್ಕಳ ನವಖಂಡವಮಾಡಿ ಕಡಿವುತ್ತಿರಲಿ | ಮುಟ್ಟುವ ಸ್ತ್ರೀಯು ಕಣ್ಣಮುಂದೆ ಅಭಿಮಾನಂಗೊಂಡು ನೆರೆವುತ್ತಿರಲಿ | ಇಂತೀ ತ್ರಿವಿಧವು ಹೊರಗಣವು | ಇನ್ನೆನ್ನಂಗದಮೇಲೆ ಬರಲಿ | ಹಿಡಿ ಖಂಡವ ಕೊಯ್ಯಲಿ | ಇಕ್ಕುವ ಶೂಲನ ಪ್ರಾಪ್ತಿಸಲಿ | ಹಾಕೊಂದೆಸೆ ಹನ್ನೊಂದೆಸೆಯಾಗಿ ಮಾಡುತ್ತಿರಲಿ | ಮತ್ತೆಯು ಲಿಂಗಾರಾಧನೆಯ ಮಾಡುವೆ | ಜಂಗಮಾರಾಧನೆಯ ಮಾಡುವೆ | ಪ್ರಸಾದಕ್ಕೆ ತಪ್ಪೆನು | ಇಂತಪ್ಪ ಭಾಷೆ ಕಿಂಚಿತ್ತು ಹುಸಿಯಾದರೆ ನೀನಂದೇ ಮೂಗ ಕೊಯ್ಯಿ ಕೂಡಲ ಸಂಗಮದೇವ||**

ಮಹೆ ಶಸ್ಥಳ ೧೮೧

**ವಿವರಣೆ**-ಆತ್ಮವೀರರೆಲ್ಲಾ ತಮ್ಮ ಶೌರ್ಯವನ್ನು ತಾವು ಕೈಕೊಂಡ ವ್ರತಗಳನ್ನಾಚರಿಸುವುದರಲ್ಲಿ ವ್ಯಕ್ತಗೊಳಿಸುತ್ತಾರೆಯೇ ವಿನಾ, ಅನ್ಯರನ್ನು ಸಂಹಾರ ಮಾಡುವುದರಲ್ಲಿ ತೋರಿಸುವುದಿಲ್ಲ. ಇಷ್ಟೇ ಅಲ್ಲ. ಅನ್ಯರು ತಮಗೆ ಎಂಥ ಹಿಂಸೆಗಳನ್ನುಂಟುಮಾಡಿದರೂ ತಾವು ಅವುಗಳನ್ನೆಲ್ಲ ಸಹಿಸಿಕೊಂಡು ಮತ್ತೆಯೂ ವ್ರತಬದ್ಧರಾಗಿರುತ್ತಾರೆಯೇ ವಿನಾ ತಮಗೆ ಹಿಂಸೆಗಳನ್ನುಂಟುಮಾಡಿದವರಿಗೆ ತಾವು ಹಿಂಸೆಗೊಳಿಸುವುದರಲ್ಲಿ ಪ್ರವೃತ್ತರಾಗುವುದಿಲ್ಲ ಇಂಥ ಆತ್ಮವೀರರಾದ ಮಹಾತ್ಮರು ಪ್ರಪಂಚದಲ್ಲಿ ಅತ್ಯಂತ ವಿರಳ. ಮಹಾನುಭಾವರಾದರೋ ಇಂಥ ಅಲೌಕಿಕ ವಿಭೂತಿಗಳಾಗಿದ್ದುದರಿಂದ ತಾವು ಸ್ವೀಕರಿಸಿದ ವೀರಶೈವ ಮಾರ್ಗದಲ್ಲಿ ಹೇಗೆ ವರ್ತಿಸುತ್ತೇವೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

" ಧನ-ಧಾನ್ಯಾದಿ ಸಂಪತ್ತೆಲ್ಲವನ್ನೂ ಬೇಕಾದ ಹಾಗೆ ಸೂರೆಮಾಡಲಿ. ನನ್ನ ಮಕ್ಕಳನ್ನು ತುಂಡುತುಂಡಾಗಿ ಕಡಿಯುತ್ತಿರಲಿ ನನ್ನ ಪತ್ನಿಯನ್ನು ನನ್ನ ಕಣ್ಣಮುಂದೆಯೇ ಭ್ರಷ್ಟಗೊಳಿಸುತ್ತಿರಲಿ. ಈ ಪ್ರಕಾರ ನನ್ನ ದೇಹಕ್ಕೆ ಪ್ರತ್ಯಕ್ಷ ಸಂಬಂಧಿಸದೆ ಇರತಕ್ಕ ಮೂರು ವಿಧಗಳಾದ ದುಃಖಗಳನ್ನುಂಟುಮಾಡುವದಲ್ಲದೆ, ಮತ್ತೆ ನನ್ನ ಮೈಮೇಲೆ ಬಂದು ಶಸ್ತ್ರದಿಂದ ನನ್ನನ್ನು ಕೊಯ್ಯಲಿ. ಶೂಲ ದಿಂದ ತಿವಿಯಲಿ. ಇಷ್ಟೆಲ್ಲಾ ಹಿಂಸೆಗಳನ್ನುಂಟುಮಾಡಿದರೂ ನಾನು ಅವರಿಗೆ ಪ್ರತಿಯಾಗಿ ಹಿಂಸೆಗೊಳಿಸುವುದರಲ್ಲಿ ಪ್ರವೃತ್ತನಾಗದೆ ಲಿಂಗಪೂಜೆ ಜಂಗಮ ದಾಸೋಹಗಳಲ್ಲಿಯೇ ಆಸಕ್ತನಾಗುವೆನು. ಈ ನನ್ನ ಪ್ರತಿಜ್ಞೆಯು ಸ್ವಲ್ಪ ಭಂಗ ವಾದರೂ ಆ ದಿವಸವೇ ಲಿಂಗದೇವನೆ, ನೀನು ನನ್ನ ಮೂಗನ್ನು ಕೊಯ್ಯು."

**(೯೩) ಆತ್ಮಸ್ತುತಿ ಪರನಿಂದೆಯ ಕೇಳಿಸದಿರಿಸಯ್ಯ ನಿಮ್ಮ ಧರ್ಮ। ಆಸುಭಕ್ತ ಎನ್ನಲ್ಲಿ ಲೇಸುಂಟೆಂದು ಪರಿಣಾಮಿಸಿದೆನಾದರೆ ನಿಮಗಾನು ದ್ರೋಹಿಯಯ್ಯ। ಕೂಡಲ ಸಂಗಮದೇವ ನಿಮ್ಮ ಶರಣರ ಲೇಸೇ ಎನ್ನ ಲೇಸಯ್ಯ॥ ಭಕ್ತಸ್ಥಳ ೪೦೬**

**ವಿವರಣೆ**-ಮಹನೀಯರಿಗೆ ಅವರ ಸ್ತುತಿ ಅನ್ಯರ ನಿಂದೆಗಳು ಅತ್ಯಂತ ದುಃಖಗಳನ್ನುಂಟುಮಾಡುತ್ತವೆ ಆತ್ಮಸ್ತುತಿಯನ್ನು ಕೇಳುವ ಪ್ರೀತಿಯು ಯಾವ ಪ್ರಮಾಣದಲ್ಲಿ ಹೆಚ್ಚಿರುತ್ತದೆಯೋ, ಆ ಪ್ರಮಾಣದಲ್ಲಿ ಜೀವನ ಗುಣಗಳು ಆತ ನಲ್ಲಿ ಹೆಚ್ಚಿವೆಯೆಂದು ತಿಳಿಯಬೇಕು. ಇಂಥವರಿಗೇನೇ ತಮ್ಮ ನಡೆ-ನುಡಿಗಳ ಬಗ್ಗೆ ಅಹಂಕಾರವಿರುತ್ತದೆ. ವಿಷಯದಲ್ಲಿ ಹೇಗಿರಬೇಕೆಂಬುದನ್ನು ಈ ವಚನ ದಲ್ಲಿ ವ್ಯಕ್ತಗೊಳಿಸಿದ್ದಾರೆ.

" ಜನರು ನನ್ನನ್ನು ಸ್ತುತಿಸುವಂಥಾದ್ದು ಮತ್ತು ಅನ್ಯರು ನಿಂದಿಸು ವಂಥಾದ್ದು ನನ್ನ ಕಿವಿಗೆ ಬೀಳದಂತೆ—ಶಿವನೇ, ನೀನು ಕೃಪೆಮಾಡು. ನಾನೇ ನಿಜವಾದ ಶಿವಭಕ್ತ, ನನ್ನಾಚಾರವೇ ಪರಿಶುದ್ಧವಾದುದೆಂಬ ಅಹಂಕಾರವು ನನ್ನಲ್ಲುಂಟಾದರೆ ನಿಮಗೆ ನಾನು ದ್ರೋಹಮಾಡಿದಂತಾಗುವುದು. ಲಿಂಗದೇವನೇ, ನಿನ್ನ ಶರಣರಿಗೆ ಯಾವುದು ಒಳ್ಳೇಯದಾಗಿದೆಯೋ, ಅದೇ ನನಗೂ ಒಳ್ಳೆಯದು."

**(೯೪) ಎಮ್ಮವರೆನಗೊಲಿದು ಹೊನ್ನ ಶೂಲದಲ್ಲಿಕ್ಕಿದರಯ್ಯ ಅಹಂಕಾರ ಪೂರಾಯ ಘಾಯದಲ್ಲಿ ಆನೆಂತು ಬದುಕುವೆ? ಆನೆಂತು ಜೀವಿಸುವೆನಯ್ಯ? ಜಂಗಮವಾಗಿ ಬಂದು, ಜರಿದು, ಶೂಲವನಿಳುಹಿ ಪ್ರಸಾದದ ಮದ್ದನಿಕ್ಕಿ ಸಲಹೋ ಕೂಡಲ ಸಂಗಮದೇವ॥ ಭಕ್ತಸ್ಥಳ ೩೪೬**

**ವಿವರಣೆ**-ಅಹಂಕಾರವು ಆತ್ಮಜ್ಞಾನವನ್ನು ಹೊಂದಲು ಪ್ರಬಲವಾದ ಪ್ರತಿಬಂಧವನ್ನುಂಟುಮಾಡತಕ್ಕದ್ದಾಗಿದೆ. ಆದಕಾರಣ ತಮ್ಮಲ್ಲಿ ಅಹಂಕಾರವುಂಟಾಗಬಾರದೆಂದು ಮುಮುಕ್ಷುಗಳು ಯಾವಾಗಲೂ ಎಚ್ಚರಿಕೆಯುಳ್ಳವರಾಗಿರುತ್ತಾರೆ. ಸರಿಯಾದ ಬೆಳೆ ಬರಬೇಕೆಂದಪೇಕ್ಷಿಸುವ ತೋಟಿಗನು ಆಗಾಗ್ಗೆ ತೋಟದಲ್ಲಿ ಹುಟ್ಟುವ (ಕಳೆ) ಹುಲ್ಲನ್ನು ಹೇಗೆ ಕಿತ್ತು ಹಾಕುತ್ತಿರುತ್ತಾನೆಯೋ, ಹಾಗೆಯೇ ಮೋಕ್ಷಾಪೇಕ್ಷಿಗಳು ತಮ್ಮಲ್ಲಿ ಆಗಾಗ್ಗೆ ತಲೆದೋರುವ ಅಹಂಕಾರವೆಂಬ ಕಸವನ್ನು ಕಿತ್ತುಹಾಕುತ್ತಾರೆ. ಈ ವಿಷಯವು ಈ ವಚನದಲ್ಲಿ ಬಹು ಸರಸವಾಗಿ ವಿವೇಚಿಸಲ್ಪಟ್ಟಿದೆ.

"ನಾನು ಮಹಾ ಭಕ್ತನೆಂದು ನಮ್ಮವರು ನನ್ನನ್ನು ಬಹು ಕೊಂಡಾಡುತ್ತಿದ್ದಾರೆ. ಆ ನನ್ನ ಸ್ತುತಿಯು ನನಗೆ ಬಂಗಾರದ ಶೂಲವಾಗಿ ಪರಿಣಮಿಸಿದೆ. ಈ ಸ್ತುತಿಯೆಂಬ ಬಂಗಾರದ ಶೂಲದಿಂದ ನಮ್ಮವರೇ ನನಗೆ ಇರಿದ ಕಾರಣ ಅಹಂಕಾರವೆಂಬ ಭಯಂಕರ ಗಾಯವುಂಟಾಯಿತಲ್ಲ! ಅಯ್ಯೋ? ಈ ಗಾಯದಿಂದ ನಾನೆಂತು ಬದುಕುವೆನು? ನಾನು ಹೇಗೆ ಜೀವಿಸುವೆನು? ಏಕೆಂದರೆ ಅಹಂಕಾರವುಂಟಾದಮೇಲೆ ಶಿವನೊಲುಮೆ ದೊರೆಯುವುದಿಲ್ಲ. ಶಿವನ ಕೃಪೆಯಾಗದಿದ್ದ ಮೇಲೆ ಹುಟ್ಟು-ಸಾವುಗಳೆಂಬ ಭವರೋಗವು ಬೆನ್ನುಬಿಡುವುದಿಲ್ಲ. ಆದಕಾರಣ ಲಿಂಗದೇವನೇ, ನೀನು ಜಂಗಮಾಕಾರದಿಂದ ಬಂದು ನನ್ನ ಭಕ್ತಿಯನ್ನು ಪರೀಕ್ಷಿಸಿ, ನಾನು, ಭಕ್ತಿಹೀನನೆಂದು ನನ್ನನ್ನು ಜರಿಯಬಾರದೆ? ಆಗ ನಾನು ಭಕ್ತನೆಂಬ ಅಹಂಕಾರವು ಅಳಿಯುವುದು. ಹಾಗೆ ಮಾಡಿದಾಗಲೇ ನನಗೆ ನಾಟಿರತಕ್ಕ ಸ್ತುತಿಯೆಂಬ ಶೂಲವು ಹೊರಗೆ ಬರುವುದು. ಆಗ ನಿನ್ನ ಕೃಪೆಯೆಂಬ ಔಷಧಿಯು ನನಗೆ ಲಭಿಸಿ ಅಹಂಕಾರದಿಂದಾದ ಗಾಯವು ಗುಣವಾಗುವುದು. ಹೀಗೆ ಮಾಡಿದರೇನೇ ನೀನು ನನ್ನನ್ನು ಸಂರಕ್ಷಿಸಿದಂತಾಗುವದು."

(೯೫) **ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯ | ಒರೆಗೆ ಬಣ್ಣಕ್ಕೆ ತಂದು ಎನ್ನ ಪುಟವಹಾಕಿ ನೋಡಯ್ಯ | ಕಡಿಯಕ್ಕೆ ಬಡಿಯಕ್ಕೆ ತಂದೆನ್ನ ಕಡಿಯಾಣಿಯ ಮಾಡಿ ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹೋ ಕೂಡಲ ಸಂಗಮದೇವ ||** **ಭಕ್ತಸ್ಥಳ ೨೫೦**

**ವಿವರಣೆ**-ಭೋಗಿಯು ದುಃಖಗಳಿಗೆ ಅಂಜುತ್ತಾನೆ. ತ್ಯಾಗಿಯಾದರೋ ಕಷ್ಟಗಳಿಗೆ ಎದೆಗೊಟ್ಟು ನಿಂತು, ತನ್ನಲ್ಲಿರುವ ದೋಷಗಳನ್ನು ಕಳೆದುಕೊಂಡು ಪ್ರಕಾಶಮಯನಾಗುತ್ತಾನೆ. ತನ್ನಲ್ಲಿರುವ ದುರ್ಗುಣ ದುರಾಚಾರಗಳೆಂಬ ರೋಗಗಳಿಗ ತನ್ನ ಮೇಲೆ ಒರತಕ್ಕ, ನಾನಾ ವಿಪತ್ತುಗಳೇ ಔಷಧಿಗಳೆಂದು ತಿಳಿಯು

ತ್ತಾನೆ. ತಾನು ಪವಿತ್ರನಾಗಲು ತನಗೊದಗುವ ವಿಪತ್ತುಗಳು ಪರಮಾತ್ಮನ ಕೃಪೆಯ ಸುಚಿನ್ಹಗಳೆಂದು ಸಂತೋಷಿಸುತ್ತಾನೆ. ಇಂಥ ಆತ್ಮವೀರರು ಪರಮಾತ್ಮನ ಕೃಪೆಗೆ ಪಾತ್ರರಾಗುವರೇ ವಿನಾ, ಕಷ್ಟಗಳಿಗಂಜಿ ದುಃಖಗಳನ್ನೆಂದೂ ಕೊಡಬೇಡೆಂದು ದೇವರನ್ನು ಬೇಡಿಕೊಳ್ಳುವ ಹೇಡಿಗಳಿಗೆ ಭಗವಂತನು ಒಲಿಯುವದಿಲ್ಲ. ಈ ತತ್ವವು ಮಹಾನುಭಾವರ ಈ ವಚನದಲ್ಲಿ ಬಹು ಸಮಂಜಸವಾಗಿ ವಿವರಿಸಲ್ಪಟ್ಟಿದೆ.

" ಬಂಗಾರವು ಒಳ್ಳೆಯದಿದೆಯೋ, ಇಲ್ಲವೋ ಎಂಬುದನ್ನು ನೋಡಬೇಕಾದರೆ ಹೇಗೆ ಅದನ್ನು ಕರಗಿಸಿ, ಒರೆಗಲ್ಲಿಗೆ ತಿಕ್ಕಿ, ಪುಟಹಾಕಿ, ಬಡಿದು ನೋಡಿ, ಒಳ್ಳೆಯದಿದ್ದರೆ ಅದನ್ನು ಆಭರಣಗಳನ್ನಾಗಿ ಮಾಡಿಕೊಳ್ಳುತ್ತಾರೆಯೋ, ಹಾಗೆಯೇ ಪರಶಿವಲಿಂಗವೇ, ನನ್ನನು ಗುರುಕಾರ್ಯಕ್ಕೆ ಹಚ್ಚಿ, ಆ ಸೇವಾಗ್ನಿಯಿಂದ ನನ್ನ ಮನಸ್ಸಿನಲ್ಲಿರುವ ಕೆಟ್ಟ ವಿಷಯಗಳೆಂಬ ದೋಷಗಳನ್ನು ಕಳೆಯಬಾರದೇ ? ಜಂಗಮ ರೂಪದಿಂದ ಬಂದು ನನ್ನನ್ನು ಬೇಡಿ, ಕಾಡಿ, ನನಗೆ ನಾನಾ ದುಃಖಗಳನ್ನುಂಟುಮಾಡಿ ನನ್ನ ಮನಸ್ಸಿನ ಶುದ್ಧತೆಯನ್ನು ನೋಡಬಾರದೆ? ಅನೇಕ ವಿಪತ್ತುಗಳನ್ನು ನೀನು ಕೊಟ್ಟರೂ ನಾನು ಅಂಜದೆ ನಿನ್ನ ಪರೀಕ್ಷೆಯಲ್ಲಿ ತೇರ್ಗಡೆಯನ್ನು ಹೊಂದಿದರೆ, ಆಗ ನನ್ನನ್ನು ನಿಮ್ಮ ಶರಣರ ಪಾದ ಸೇವೆಗೆ ಒಪ್ಪಿಸು. ಹಾಗೆ ಮಾಡಿದರೆ ಲಿಂಗದೇವನೆ, ನೀನು ನನ್ನನ್ನು ರಕ್ಷಿಸಿದಂತಾಗುವುದು.

**(೯೬) ಕಾಮವ ತೊರೆದಾತ | ಹೇಮವ ಜರಿದಾತ | ಭಾಸುವಿಸುದಯುಕ್ಕೆ ಒಳಗಾಗದ ಶರಣನು | ಆವಾಗಳೂ ನಿಮ್ಮ ಮಾಣದೆ ನೆನೆವರ ಮನೆಯಲು ಶ್ವಾನನಾಗಿರಿಸು ಕೂಡಲ ಸಂಗಮದೇವ||** ಭಕ್ತಸ್ಥಳ ೩೫೨

**ವಿವರಣೆ**-ಪರಮಾತ್ಮನಿಗೆ ಶರಣುಹೋದ ಭಗವದ್ಭಕ್ತರು ವಿಷಯಗಳಿಗೆ ದಾಸರಾದ ವಿಷಯಲೋಲುಪ್ತರಂತೆ ಕನಕ-ಕಾಂತೆಯರಿಗೆ ಮನಸೋಲುವುದಿಲ್ಲ. ಇವರ ಚಿತ್ತವೆಲ್ಲವೂ ಪರಮಾತ್ಮನ ನೆನವಿನಲ್ಲಾಗಲಿ ಅಥವಾ ಆತನ ದೃಶ್ಯರೂಪವಾದ ಈ ವಿಶ್ವದ ಸೇವೆಯಲ್ಲಾಗಲೀ ಮಗ್ನವಾಗಿರುತ್ತದೆ. ಆದಕಾರಣ ಇಂಥ ಮಹಾತ್ಮರ ಸೇವೆಯಲ್ಲಿರುವುದು ಬಹು ಫಲಕಾರಿಯಾದುದೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

" ಸ್ತ್ರೀ ಮೋಹವನ್ನು ಬಿಟ್ಟು, ಧನ-ಧಾನ್ಯಾದಿ ಸಂಪತ್ತನ್ನು ತಿರಸ್ಕರಿಸಿ, ಮರಣಕ್ಕೆ ಅಂಜದೆ ಯಾವ ಮಹಾನುಭಾವನು ಇರುತ್ತಾನೋ, ಆತನೇ

ಶಿವಶರಣನು. ಆತನು ನಿರಂತರದಲ್ಲಿಯೂ ಶಿವಧ್ಯಾನಾಸಕ್ತನಾಗಿರುವುದರಿಂದ ಆ ಶರಣನ ಮನೆಯಲ್ಲಿ ನನ್ನನ್ನು ನಾಯಿಯನ್ನಾಗಿ ಮಾಡಿಯಾದರೂ ಇರಿಸು. ಏಕೆಂದರೆ, ಇಂಥ ಶಿವಶರಣನ ಹತ್ತಿರ ನಾಯಿಯಾಗಿದ್ದರೂ ಆತನ ದರ್ಶನ-ಸ್ಪರ್ಶನಗಳಿಂದ ನನ್ನ ಜನ್ಮವು ಸಾರ್ಥಕವಾಗುವುದು

**(೯೭) ಹೊಲಬುಗೆಟ್ಟ ಶಿಶು ತನ್ನ ತಾಯಿಯ ಬಯಸುವಂತೆ| ಬಳಿದಪ್ಪಿದ ಪಶು ತನ್ನ ಹಿಂಡನರಸುವಂತೆ | ಬಯಸುತ್ತಿರ್ದೆನಯ್ಯ ನಿಮ್ಮ ಶರಣರ ಬರವನು | ಬಯಸುತ್ತಿರ್ದೆನಯ್ಯ ನಿಮ್ಮ ಭಕ್ತರ ಬರವನು |ದಿನಕರನುದಯಕ್ಕೆ ಕಮಲವಿಕಸಿತವಾದಂತೆ ಎನಗೆ ನಿಮ್ಮ ಶರಣರ ಬರವು ಕೂಡಲ ಸಂಗಮದೇವ || ಭಕ್ತಸ್ಥಳ ೩೭೪.**

ವಿವರಣೆ-ಲೋಕದಲ್ಲಿ ಎರಡು ವಿಧವಾದ ಬಂಧುಗಳಿದ್ದಾರೆ. ತಮ್ಮ ಹಿತಕ್ಕಾಗಿ ಅನ್ಯರನ್ನು ಸಹೋದರರಂತೆ ಪ್ರೀತಿಸುವವರು ನಿಮಿತ್ತ ಬಂಧುಗಳು. ಕೆಲವು ಮಹನೀಯರಾದರೋ ಅನ್ಯರಿಂದ ಯಾವ ಫಲಾಪೇಕ್ಷೆಯನ್ನೂ ಇಟ್ಟುಕೊಳ್ಳದೆ, ಕೇವಲ ತಮ್ಮ ಪ್ರೇಮಕ್ಕಾಗಿ ಅಥವಾ ಅವರ ವಿಷಯದಲ್ಲಿ ತಮಗುಂಟಾಗಿರುವ ತಾಪವನ್ನು ನಿವಾರಣೆ ಮಾಡಿಕೊಳ್ಳುವದಕ್ಕಾಗಿ ಅವರನ್ನು ಸಹೋದರರಿಗಿಂತಲೂ ಹೆಚ್ಚಾಗಿ ತಿಳಿದು, ಅವರ ಕ್ಷೇಮಾರ್ಥವಾಗಿ ಪ್ರಯತ್ನಿಸುತ್ತಾರೆ; ಇವರು ಅನಿಮಿತ್ತ ಬಂಧುಗಳು. ಇಂಥ ಮಹಾನುಭಾವರ ಮಹತ್ವವನ್ನರಿತವರಿಗೆ ತಮ್ಮ ತಾಯಿತಂದೆಗಳಿಗಿಂತಲೂ ಆ ಪರಮ ಪವಿತ್ರ ವ್ಯಕ್ತಿಗಳು ಹೆಚ್ಚು ಆದರ-ವಿಶ್ವಾಸಗಳಿಗೆ ಪಾತ್ರರಾಗಿರುತ್ತಾರೆ. ಆದಕಾರಣ ಅವರ ಆಗಮನವು ತಮ್ಮ ಸರ್ವ ಶ್ರೇಯಸ್ಸುಗಳಿಗೂ ಬಹು ಸಹಾಯಕವಾದುದೆಂದು ತಿಳಿದು, ಅವರ ಬರುವಿಕೆಯನ್ನೇ ಹಾರೈಸುತ್ತಾರೆ. ಈ ವಚನದಲ್ಲಾದರೋ ಇಂಥ ಮಹಾನುಭಾವರ ಆಗಮನದ ಮಹತ್ವವೇ ವಿವರಿಸಲ್ಪಟ್ಟಿದೆ.

“ ದಾರಿ ತಪ್ಪಿದ ಮಗು ತನ್ನ ತಾಯಿಯನ್ನೇ ನೆನೆಸುತ್ತಿರುವಂತೆ ಮತ್ತು ಹಿಂಡುಬಿಟ್ಟು ಹೋದ ದನವು ತನ್ನ ಹಿಂಡನ್ನೇ ಹುಡುಕುತ್ತಿರುವಂತೆ ನಾನು ಶಿವಶರಣರ ಮತ್ತು ಶಿವಭಕ್ತರ ಬರುವಿಕೆಯನ್ನೇ ಚಿಂತಿಸುತ್ತಿದ್ದೇನು. ಸೂರ್ಯನು ಬಂದೊಡನೆಯೇ ಕಮಲವು ಹೇಗೆ ಸಂತೋಷದಿಂದ ಅರಳುತ್ತದೆಯೋ ಹಾಗೆಯೇ ಶಿವಶರಣರ ಆಗಮನವು ನನ್ನ ಮನಸ್ಸನ್ನು ಆನಂದಗೊಳಿಸುತ್ತದೆ.

(೯೮) ಶಿವಚಿಂತೆ ಶಿವಜ್ಞಾನವಿಲ್ಲದ ಮನುಜರು ಸಗಣಕ್ಕೆ ಸಾವಿರ ಹುಳ ಹುಟ್ಟವೆ ದೇವ ? ಕಾಡಮೃಗವೊಂದಾಗಿರಲಾಗದೆ ದೇವ? ಊರಮೃಗ ಒಂದಾಗಿರಲಾಗದೆ ಗುರುವೇ? ನಮ್ಮ ಕೂಡಲಸಂಗನ ಶರಣರಿಲ್ಲದೂರು ದೇಶವನವಾಸ; ನರವಿಂಧ್ಯ ಕಾಣಿರಂಣಾ || ಭಕ್ತಸ್ಥಳ ೧೫೬

ವಿವರಣೆ- ಆತ್ಮೋನ್ನತಿಯನ್ನು ಮಾಡಿಕೊಂಡು ಆತ್ಮಾನಂದದಲ್ಲಿರುವುದೇ ಮನುಷ್ಯಜನ್ಮದ ಮುಖ್ಯ ಉದ್ದೇಶವಾಗಿದೆ. ಆದಕಾರಣ ಇದನ್ನು ಬಿಟ್ಟು ಕೇವಲ ಐಹಿಕ ಸುಖೋಪಭೋಗದಲ್ಲಿಯೇ ಆಸಕ್ತರಾಗಿ ಸತ್ತು ಹೋಗುವ ಪ್ರಾಣಿಗಳ ಜನ್ಮವು ವ್ಯರ್ಥವಾಗುವುದು ಸಹಜವಲ್ಲವೇ? ಆತ್ಮಜ್ಞಾನಿಗಳಾಗಿ ಜನಗಳಿಗೆ ನ್ಯಾಯ-ನೀತಿಯನ್ನು ಬೋಧಿಸುವ ಮಹಾನುಭಾವರು ಊರಲ್ಲಿದ್ದರೇನೇ ಆ ಊರ ಜನರಲ್ಲಿ ಸದ್ಗುಣ ಸದಾಚಾರಗಳುಂಟಾಗಿ, ಸುಖಶಾಂತಿಗಳಿಂದ ಅವರು ಬಾಳಬಹುದು. ಇಂಥವರಿಲ್ಲದಿದ್ದ ಮೇಲೆ ಸದುಪದೇಶಕ್ಕವಕಾಶವಿಲ್ಲದೆ ಎಲ್ಲರೂ ಕೇವಲ ಸ್ವಾರ್ಥಿಗಳಾಗಿ ತಮ್ಮ ಹಿತಕ್ಕೋಸ್ಕರ ಅನ್ಯರನ್ನು ಮೋಸ-ಹಿಂಸೆಗಳಿ ಗೀಡುಮಾಡುವರು. ಅಂಥ ಊರಲ್ಲಿ ಮತ್ತು ದೇಶದಲ್ಲಿ ವಾಸವಾಗಿದ್ದರೆ ಅಡವಿಯಲ್ಲಿ ಹುಲಿ ಮೊದಲಾದ ಕ್ರೂರ ಮೃಗಗಳ ಗುಂಪಿನಲ್ಲಿದ್ದಂತೆಯೇ ಸರಿ. ಏಕೆಂದರೆ, ಎಲ್ಲರೂ ಒಬ್ಬರನ್ನೊಬ್ಬರು ಮೋಸ-ಕಪಟಾದಿಗಳಿಂದ ಹಿಂಸಿಸಿ ತಮ್ಮ ತಮ್ಮ ಸುಖ ಸಂಪಾದನೆಗಾಗಿಯೇ ಪ್ರಯತ್ನಿಸುತ್ತಿರುತ್ತಾರೆ. ಆದಕಾರಣ ಪರಮಾತ್ಮನ ಚಿಂತನೆಯಿಲ್ಲದ ಜನ್ಮವು ವ್ಯರ್ಥವೆಂತಲೂ, ಅಂಥವರಿಲ್ಲದಿದ್ದ ಸ್ಥಳವು ಕಾಡಮೃಗಗಳು ವಾಸಿಸುವ ಅರಣ್ಯವೆಂತಲೂ ಈ ವಚನದಲ್ಲಿ ವಿವರಿಸಿದ್ದಾರೆ.

" ಮನುಷ್ಯನಾದ ನಂತರ ಆತನಲ್ಲಿ ಶಿವಧ್ಯಾನ, ಶಿವಾದ್ವೈತ ಜ್ಞಾನ ಇವುಗಳಿರಲೇಬೇಕು. ಇವುಗಳಿಲ್ಲದೆ ಹುಟ್ಟಿ ಸಾಯುವವರು ಸಗಣಿಯಲ್ಲಿ ಮಧ್ಯಾಹ್ನದೊಳಗಾಗಿ ಸಾವಿರಾರು ಹುಳಗಳು ಹುಟ್ಟಿ ಹೇಗೆ ನಿರರ್ಥಕವಾಗಿ ಸತ್ತುಹೋಗುತ್ತವೆಯೋ, ಹಾಗೆಯೇ ಸುಮ್ಮನೆ ಹುಟ್ಟಿ ಸತ್ತುಹೋದಂತಾಗುವುದು. 'ಶಿವಧ್ಯಾನ ಶಿವಜ್ಞಾನಗಳಿಲ್ಲದಿದ್ದರೇನಾಯಿತು? ನಾವು ಮನೆಮಠಗಳನ್ನು ಮಾಡಿಕೊಂಡು ಸಮೂಹದೊಡನೆ ವಾಸವಾಗಿರುವುದಿಲ್ಲವೇ? ನಮಗೇಕೆ ಮನುಷ್ಯರೆನ್ನಬಾರದು?. ಎಂದು ಪ್ರಶ್ನೆ ಮಾಡಿದರೆ ಅಡವಿಯಲ್ಲಿ ಆನೆ ಚಿಗರಿ ಮೊದಲಾದ ಪಶುಗಳು ಹಿಂಡುಗಟ್ಟಿಕೊಂಡು ಸಮೂಹದೊಡನೆಯೇ ಇರುವುದಿಲ್ಲವೇ? ಊರಲ್ಲಿ ಗುಬ್ಬಿ-ಕಾಗೆಗಳು ಮನೆಮಾಡಿಕೊಂಡು ಜೋಡಾಗಿಯೇ ಇರುವುದಿಲ್ಲವೇ? ಇವುಗಳಿಗೆಲ್ಲಾ ಮನುಷ್ಯ ಪ್ರಾಣಿಗಳೆಂದು ಹೇಳಲಿಕ್ಕಾಗು

ವುದೇ? ಇಲ್ಲವೇ ಇಲ್ಲ ಶಿವನಲ್ಲಿ ಶ್ರೇಷ್ಠತರವಾದ ಭಕ್ತಿಯುಳ್ಳ ಶಿವಶರಣರಿಲ್ಲದ ಊರಲ್ಲಿರುವುದೂ, ಅಡವಿಯಲ್ಲಿರುವುದೂ ಒಂದೇ ಸರಿ. ಇಂಥ ಮಹಾನುಭಾವರಿಲ್ಲದ ದೇಶವು ಮನುಷ್ಯರೂಪವುಳ್ಳ ಮೃಗಗಳಿಂದ ಕೂಡಿದ ಘೋರಾರಣ್ಯವೆಂದೇ ತಿಳಿಯಬೇಕು."

**(೯೯) ಧನದಲ್ಲಿ ಶುಚಿ | ಪ್ರಾಣದಲ್ಲಿ ನಿರ್ಭಯ | ಇದಾವಂಗೆ ಅಳವಡುವುದಯ್ಯ? ನಿಧಾನ ತಪ್ಪಿ ಬಂದರೆ ಒಲ್ಲೆನೆಂಬುವವರಿಲ್ಲ | ಪ್ರಮಾದ ವಶಬಂದರೆ ಹುಸಿಯೆನೆಂಬುವರಿಲ್ಲ ನಿರಾಶೆ ನಿರ್ಭಯ ಕೂಡಲ ಸಂಗಮದೇವ ನೀನೊಲಿದ ಶರಣಂಗಲ್ಲದಿಲ್ಲ ||** ಶರಣಸ್ಥಳ ೧

**ವಿವರಣೆ**- ಹಣವನ್ನು ಕೂಡಿ ಹಾಕುವುದೇ ತಮ್ಮ ಜೀವಿತದ ಉದ್ದೇಶವೆಂದು ತಿಳಿದು ಕೆಲವರು ಹಣಕ್ಕಾಗಿಯೇ ಈ ಲೋಕದಲ್ಲಿ ಬದುಕಿರುತ್ತಾರೆ. ಹಣ ಹೋದೊಡನೆ ಪ್ರಾಣವನ್ನೇ ಬಿಟ್ಟುಬಿಡುತ್ತಾರೆ. ಇಂಥವರು ನಾನಾ ರೀತಿಗಳಿಂದ ಹಣವನ್ನು ಕೂಡಿಸುವುದು ಸ್ವಾಭಾವಿಕವಾಗಿದೆ. ಏಕೆಂದರೆ, ತಮಗಾಗಿ ಹಣವಿದೆಯೆಂದು ಇವರು ತಿಳಿದಿರುವುದಿಲ್ಲ; ಹಣಕ್ಕಾಗಿ ತಾವಿದ್ದೇವೆಂದು ಇವರು ಭಾವಿಸಿರುತ್ತಾರೆ ಹೇಗಾದರೂ ಜೀವವಿಂದಿರಬೇಕೆಂಬ ಜೀವಗಳ್ಳರು ಲೋಕದಲ್ಲಿ ಅತ್ಯಧಿಕ. ಜೀವ ಹೋಗುವ ಸಮಯ ಬಂದಿತೆಂದರೆ ಅನ್ಯಾಯ-ಅನಾಚಾರ-ಅಧರ್ಮ-ಅಸತ್ಯಾದಿಗಳಿಂದ ಹೇಗಾದರೂ ಆಚರಿಸಿ, ಅಂತೂ ಜೀವವನ್ನುಳಿಸಿಕೊಳ್ಳಬೇಕೆಂದಪೇಕ್ಷಿಸುವವರೇ ಲೌಕಿಕರು. ಸತ್ಯಸಂಧರಾದರೋ ಆ ಭಗವದ್ಭಕ್ತರಾದರೋ ಧನಪ್ರಾಣಗಳನ್ನು ಸತ್ಯಕ್ಕೋಸ್ಕರ ಧರ್ಮಕ್ಕೋಸ್ಕರ ಕಡ್ಡಿಗಿಂತಲೂ ಕಡೆಯಾಗಿ ಸೂರೆಮಾಡುತ್ತಾರಷ್ಟೆ. ಅಂಥ ಮಹಾತ್ಮರನ್ನು ಕುರಿತು ಈ ವಚನದಲ್ಲಿ ವಿವರಿಸಲ್ಪಟ್ಟಿದೆ.

"ದ್ರವ್ಯ ತಾನಾಗಿಯೇ ಬಂದು ಬಿದ್ದರೆ ಬೇಡವೆಂದು ಹೇಳುವದಾಗಲಿ, ಜೀವಹೋಗುವ ಪ್ರಸಂಗ ಪ್ರಾಪ್ತವಾದರೆ ಸುಳ್ಳು ಮಾತನಾಡದಿರುವುದಾಗಲಿ ಸಾಧಾರಣ ಮನುಷ್ಯರಿಗೆ ಸಾಧ್ಯವೇ? ಎಂದೂ ಸಾಧ್ಯವಲ್ಲ. ಯಾವ ಮಹಾನುಭಾವನಿಗೆ ಲಿಂಗದೇವನ ಕೃಪೆಯಾಗಿದೆಯೋ, ಅಂಥ ಶಿವಶರಣನಲ್ಲಿ ಮಾತ್ರ ಪರಧನವು ಬೇಡವೆಂಬ ದ್ರವ್ಯದಲ್ಲಿ ಅಶುಚಿತ್ವವು ಮತ್ತು ಸತ್ಯಕ್ಕೋಸ್ಕರ ಪ್ರಾಣವು ಸಮರ್ಪಿಸಲ್ಪಡಲೆಂಬ ನಿರ್ಭಯತ್ವವು ಇರುವುವು."

**(೧೦೦) ಹಾವಿನ ಹೆಡೆಗಳಕೊಂಡು ಕೆನ್ನೆಯ ತುರಿಸುವಂತೆ | ಉರಿಯ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕ ಬಿಡಿಸುವಂತೆ | ಹುಲಿಯ**

**ಮೀಸೆಯ ಹಿಡಿದುಕೊಂಡು ಒಲದುಯ್ಯಾಲೆನಾಡುವಂತೆ | ಕೂಡಲಸಂಗನ ಶರಣರೊಡನೆ ಮರೆದು ಸರಸವಾಡಿದರೆ | ಸುಣ್ಣದ ಕಲ್ಲ ಮಡಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ ||** ಮಹೇಶಸ್ಥಳ ೧೩೬

**ವಿವರಣೆ**- ಮಹಾನುಭಾವರ ಸಂಗಡ ಎಚ್ಚರಿಕೆಯಿಂದ ಭಯ ಭಕ್ತಿಯುತರಾಗಿ ವಿಹಿತವಾದ ಮಾತುಗಳನ್ನಾಡಬೇಕೇ ವಿನಾ ವಿನೋದ ಸರಸ ಸಲ್ಲಾಪಗಳನ್ನಾಗಲಿ, ಅನುಚಿತವಾದ ಮಾತುಗಳನ್ನಾಗಲಿ, ಆಡಬಾರದೆಂದು ಈ ವಚನದಲ್ಲಿ ವಿವರಿಸಿದ್ದಾರೆ.

"ಹಾವಿನ ಹೆಡೆಯನ್ನು ಹಿಡಿದುಕೊಂಡು ಅದರಿಂದ ತನ್ನ ಗಲ್ಲವನ್ನು ತುರಿಸಿಕೊಳ್ಳಲಿಕ್ಕೆ ಹೋದರೆ ಹಾವಿನಿಂದ ಹೇಗೆ ಕಡಿಸಿಕೊಳ್ಳಬೇಕಾಗುತ್ತದೆಯೋ, ಉರಿಯುವ ಕೊಳ್ಳಿಯನ್ನು ತೆಗೆದುಕೊಂಡು ತಲೆಗೂದಲ ಸಿಕ್ಕನ್ನು ಬಿಡಿಸಿಕೊಳ್ಳಲಿಕ್ಕೆ ಹೋದರೆ ತಲೆಯನ್ನು ಹೇಗೆ ಸುಟ್ಟುಕೊಳ್ಳಬೇಕಾಗುತ್ತದೆಯೋ, ಹುಲಿಯ ಮೀಸೆಯನ್ನು ಹಿಡಿದುಕೊಂಡು ತೂಗಾಡುತ್ತೇನೆಂದು ಹೋದರೆ ಹೇಗೆ ಹುಲಿಯ ಬಾಯಲ್ಲಿ ಬೀಳಬೇಕಾಗುತ್ತದೆಯೋ ಮತ್ತು ಸುಣ್ಣದ ಕಲ್ಲನ್ನು ಉಡಿಯಲ್ಲಿ ಕಟ್ಟಿಕೊಂಡು ನೀರಿನ ಮಡುವಿನಲ್ಲಿ ಬಿದ್ದರೆ ಹೇಗೆ ಮುಳುಗಿ ಸುಟ್ಟುಕೊಂಡು ಸಾಯಬೇಕಾಗುತ್ತದೆಯೋ, ಹಾಗೆಯೇ ಶಿವಶರಣರ ಸಂಗಡ ಮರೆತಾದರೂ ಹಾಸ್ಯದ ಮಾತುಗಳನ್ನಾಡಿದರೆ ದುಃಖಕ್ಕೀಡಾಗಬೇಕಾಗುತ್ತದೆ."

**(೧೧೧) ದೇವಲೋಕ ಮರ್ತ್ಯಲೋಕವೆಂಬ ಸೀಮೆಯುಳ್ಳನ್ನಕ್ಕ ಕೇವಲ ಶರಣನಾಗಲರಿಯ | ಸತ್ತು ಬೆರಸಿಹೆನೆಂದರೆ ಕಬ್ಬಿನ ತುದಿಯ ಮೆಲಿದಂತೆ ಕೂಡಲಸಂಗಮದೇವ ||** ಐಕ್ಯಸ್ಥಳ ೫

**ವಿವರಣೆ**- ಭಗವದ್ಭಕ್ತರು ಇಹಲೋಕದಲ್ಲಿ ಹೇಗೆ ಜೀವಿಸಬೇಕೆಂಬ ತತ್ವವು ಈ ವಚನದಲ್ಲಿ ವಿವರಿಸಲ್ಪಟ್ಟಿದೆ.

"ಶಿವನಲ್ಲಿ ಅಸಾಧಾರಣವಾದ ಭಕ್ತಿಯುಳ್ಳ ಶಿವಶರಣನಿಗೆ ಅದು ದೇವಲೋಕ ಇದು ಮರ್ತ್ಯಲೋಕವೆಂಬ ಭಿನ್ನಭಾವನೆಗಳಿರುವುದಿಲ್ಲ. ಏಕೆಂದರೆ ದೇವಲೋಕದಲ್ಲಿ ನಿಜಾನಂದದ ಯಾವ ಸುಖ-ಶಾಂತಿಗಳನ್ನು ಅನುಭವಿಸಬಲ್ಲನೋ ಅವುಗಳನ್ನೇ ಈ ಮರ್ತ್ಯಲೋಕದಲ್ಲಿ ಕೂಡಾ ಈ ಜಡದೇಹವನ್ನು ಧರಿಸಿಕೊಂಡೇ ಅನುಭವಿಸುತ್ತಿರುತ್ತಾನೆ. ಇಂಥ ಸಾಮರ್ಥ್ಯವಿಲ್ಲದೆ ದೇವಲೋಕವನ್ನು ಬಯಸುವವನು ನಿಜವಾದ ಶಿವಶರಣನಲ್ಲ. ಈ ಸ್ಥೂಲ ದೇಹವನ್ನು ಬಿಟ್ಟನಂತರವೇ ಮುಕ್ತಿಯ ಸುಖವನ್ನನುಭವಿಸಬೇಕೆಂಬುವವನು ನಿಸ್ಸಾರವಾದ ಕಬ್ಬಿನ ತುದಿಯನ್ನು ತಿನ್ನುವವನಂತೆಯೇ ಸರಿ."

**(೧೦೩) ಶರಣ ನಿದ್ರೆಗೈದರೆ ಜಪಕಾಣಿರೋ | ಶರಣನೆದ್ದು ಕುಳಿತರೆ ಶಿವರಾತ್ರಿ ಕಾಣಿರೋ | ಶರಣನಡೆದುದೇ ಪಾವನ ಕಾಣಿರೋ ಶರಣನುಡಿದುದೇ ಶಿವತತ್ವ ಕಾಣಿರೋ | ಕೂಡಲಸಂಗನ ಶರಣನ ಕಾಯವೇ ಕೈಲಾಸ ಕಾಣಿರೋ ||** ಶರಣಸ್ಥಳ ೧೯

**ವಿವರಣೆ-** ಆತ್ಮಜ್ಞಾನಿಗಳ ನಡೆನುಡಿಗಳೆಲ್ಲ ನಿಜಾನಂದದ ಲಕ್ಷಣಗಳನ್ನೇ ವ್ಯಕ್ತಗೊಳಿಸುತ್ತಿರುತ್ತವೆ ಅನೇಕ ಪ್ರಾಣಿಗಳ ಉದ್ಧಾರಾರ್ಥವಾಗಿಯೇ ಅವರ ಜೀವಿತಯಾತ್ರೆಯು ನಡೆದಿರುತ್ತದೆ. ಆದಕಾರಣ ಅವರ ಮಹತ್ವವು ಎಷ್ಟಿದೆ ಎಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ

"ನಿಜವಾದ ಶಿವಶರಣನು ನಿದ್ರೆಹೋದಾಗಲು ಕೂಡಾ ಶಿವೋಹಂ ಎಂಬ ಧ್ಯಾನವುಳ್ಳವನಾಗಿರುವುದರಿಂದ ಆತನ ಶ್ವಾಸೋಚ್ಛ್ವಾಸವು ಶಿವಚಿಂತನೆಯ ಜಪವಾಗಿಯೇ ಪರಿಣಮಿಸುತ್ತದೆ. ಆತನು ಎಚ್ಚತ್ತು ಕುಳಿತರಂತೂ ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ ಮತ್ತು ಅಂತಃಕರಣ ಚತುಷ್ಟಯ ಈ ಹದಿನಾಲ್ಕು ಇಂದ್ರಿಯಗಳೂ ಶಿವನಲ್ಲಿ ಅತ್ಯಂತ ಜಾಗ್ರತವಾಗಿಯೇ ಇರುತ್ತವೆ. ಆದುದರಿಂದ ಇಂಥ ಶರಣನು ಪಾದವಿಟ್ಟ ಸ್ಥಳವು ಪಾವನಕ್ಷೇತ್ರವಾಗಿ ಪರಿಣಮಿಸುವುದಿಲ್ಲವೇ? ಇಂಥ ಶಿವಶರಣನು ನುಡಿವ ನುಡಿಯೇ ಪ್ರಾಣಿಗಳನ್ನು ಉದ್ಧಾರ ಮಾಡುವ ಶಿವತತ್ವವಾಗಿ ಪರಿಣಮಿಸುವುದಿಲ್ಲವೇ? ಇಷ್ಟಾದಮೇಲೆ ಆ ಶರಣನ ಕಾಯವೇ ಶಿವನಿರುವ ಕೈಲಾಸವಲ್ಲವೇ?"

**(೧೦೪) ಲಿಂಗವಿಕಾರಿಗೆ ಅಂಗವಿಕಾರವೆಂಬುದಿಲ್ಲ | ಜಂಗಮವಿಕಾರಿಗೆ ಧನವಿಕಾರವೆಂಬುದಿಲ್ಲ | ಪ್ರಸಾದವಿಕಾರಿಗೆ ಮನವಿಕಾರವೆಂಬುದಿಲ್ಲ | ಇಂತೀ ತ್ರಿವಿಧ ಗುಣವನರಿದಾತನು ಅಚ್ಚಲಿಂಗೈಕ್ಯನು ಕೂಡಲಸಂಗಮದೇವ ||** ಪ್ರಸಾದಿಸ್ಥಳ ೩೦

**ವಿವರಣೆ-** ಮನುಷ್ಯನ ತನುಮನಧನಗಳ ವಿನಿಯೋಗದ ಮೇಲಿಂದಲೇ ಆತನ ಸ್ಥಿತಿಗತಿಗಳನ್ನು ಕಂಡುಕೊಳ್ಳಬಹುದು. ಭೋಗಿಯು ಯಾವಾಗಲೂ ಇವುಗಳನ್ನು ವಿಷಯೋಪಭೋಗಗಳಿಗಾಗಿಯೇ ವಿನಿಯೋಗಿಸಿ ನಾನಾ ದುಃಖಗಳಿಗೀಡಾಗುತ್ತಾನೆ. ತ್ಯಾಗಿಯಾದರೋ ತನ್ನ ತನುಮನಧನಗಳನ್ನು ಪರಮಾತ್ಮನಿಗೂ, ಆತನ ವ್ಯಕ್ತಸ್ವರೂಪನಾದ ಈ ವಿಶ್ವದ ಸೇವೆಗೂ ಸೂರೆಮಾಡುತ್ತಾನೆ. ಅಂಥ ಮಹಾತ್ಮನ ವಿಷಯವಾಗಿ ಈ ವಚನದಲ್ಲಿ ವಿವರಿಸಿದ್ದಾರೆ.

" ಲಿಂಗದೇವನ ಪೂಜಿಸಿ ಧ್ಯಾನಿಸಿ, ಆತನ ಸ್ಮರಣೆಯಲ್ಲಿಯೇ ಇರಬೇಕೆಂಬ ಮಹಾನುಭಾವರಿಗೆ 'ನಾನಾ ಪಕ್ವಾನ್ನಗಳನ್ನು ಊಟಮಾಡಬೇಕು; ಅನೇಕ ಭೂಷಣಪ್ರದವಾದ ವಸ್ತ್ರಗಳನ್ನುಡಬೇಕು; ಅನೇಕ ಅಂದಚಂದದ ಪದಾರ್ಥಗಳನ್ನು ತೊಡಬೇಕು' ಈ ಮೊದಲಾದ ದೇಹಸಂಬಂಧದ ಭೋಗಗಳ ಅಪೇಕ್ಷೆಯೇ ಆಗುವುದಿಲ್ಲ. ಶಿವತತ್ವವನ್ನರಿತು ಪರಮಜ್ಞಾನಿಗಳಾಗಿ ಲೋಕವನ್ನು ಉದ್ಧಾರಮಾಡುತ್ತಿರುವ ಜಂಗಮ ಮೂರ್ತಿಗಳ ಇಚ್ಛೆಯನ್ನು ಪೂರ್ತಿಗೊಳಿಸುವುದರಲ್ಲಿಯೇ ಮಗ್ನನಾದ ಜಂಗಮ ಪ್ರಾಣಿಗೆ ಧನದಾಸೆಯು ಇರುವುದೇ ಇಲ್ಲ. ಯಾರು ಪ್ರಸಾದ ಸಿದ್ಧಿಯುಳ್ಳವರಾಗಿರುತ್ತಾರೆಯೋ, ಅವರು ಮನಸ್ಸಿನ ಚಾಂಚಲ್ಯಕ್ಕೆ ಒಳಗಾಗುವುದಿಲ್ಲ. ಏಕೆಂದರೆ, ಮನುಷ್ಯನು ಸೇವಿಸುವ ಆಹಾರಕ್ಕನುಗುಣವಾಗಿಯೇ ಆತನಲ್ಲಿ ರಕ್ತವುಂಟಾಗುತ್ತದೆ. ಆ ರಕ್ತಕ್ಕನುಸರಿಸಿಯೇ ಆತನ ಮನಸ್ಸು ಪ್ರವರ್ತಿಸುತ್ತದೆ. ಆದಕಾರಣ ಶುದ್ಧ ಸಾತ್ವಿಕ ಆಹಾರವನ್ನು ಮಿತವಾಗಿ ಸೇವಿಸಿ ಪ್ರಸಾದಸಿದ್ಧಿಯನ್ನು ಹೊಂದಿದವರಿಗೆ ಮನೋವಿಕಾರಗಳುಂಟಾಗುವುದಿಲ್ಲ. ಇಂಥ ಮಹಾನುಭಾವರೇ ಲಿಂಗಮೂರ್ತಿಯಲ್ಲಿ ಐಕ್ಯರಾಗುವರೆಂದು ತಿಳಿಯಬೇಕು "

**(೧೦೪) ಪರತತ್ವದ ನಿಜಸಂಯುಕ್ತರ ಆನು ನೀನೆಂಬ ಶಬ್ದ ಸುಖಿಗಳ ತೋರಾ ಎನಗೆ | ಮಹಾನುಭಾವರ ತೋರಾ ಎನಗೆ | ಲಿಂಗೈಕ್ಯರ ಲಿಂಗಸುಖಿಗಳ ಲಿಂಗಗೂಡಾಗಿಪ್ಪವರ ಲಿಂಗಾಭಿಮಾನಿಗಳ ತೋರಾ ಎನಗೆ | ಅಹೋರಾತ್ರಿಯಲ್ಲಿ ನಿಮ್ಮ ಶರಣರ ಸೇವೆಯಲ್ಲಿರಿಸು ಕೂಡಲ ಸಂಗಮದೇವ ||** ಶರಣಸ್ಥಳ ೨೭.

**ವಿವರಣೆ**- ಪರಮಾತ್ಮನಲ್ಲಿ ದೃಢತರವಾದ ಭಕ್ತಿಯುಳ್ಳ ಭಗವದ್ಭಕ್ತರು ಮುಕ್ತಿಯ ನಿಜಾನಂದದಲ್ಲಿ ಲೋಲಾಡುವುದಕ್ಕಿಂತಲೂ ಪರಮಾತ್ಮನಿಗೆ ಶರಣಾಗತರಾದ ಪವಿತ್ರಾತ್ಮರ ಸೇವೆಯಲ್ಲಿ ಮಗ್ನವಾಗುವುದೇ ತಮಗೆ ಹೆಚ್ಚು ಪ್ರಿಯಕರವಾದುದೆಂದು ತಿಳಿಯುತ್ತಾರೆ. ತಮ್ಮ ಸೇವೆಯನ್ನು ಅನ್ಯರು ಮಾಡುತ್ತಿರಬೇಕೆಂದು ಇವರು ಅಪೇಕ್ಷಿಸುವುದಿಲ್ಲ. ತಾವೇ ಅನ್ಯರ ಸೇವೆಯನ್ನು ಮಾಡಬೇಕೆಂದು ಹಂಬಲಿಸುತ್ತಾರೆ. ಮಹಾನುಭಾವರ ಈ ವಚನದಲ್ಲಾದರೋ ಈ ಹಂಬಲಿಕೆಯೇ ವ್ಯಕ್ತವಾಗುತ್ತದೆ.

" **ಪರತತ್ವದಲ್ಲಿ ಬೆರೆತಿರುವಂಥವರನ್ನೂ, ಆ ಶಿವನೇ ಈ ಜೀವನೆಂಬ ಶಿವೋಹಂ ಭಾವನೆಯುಳ್ಳವರನ್ನೂ, ಲಿಂಗದೇವನಲ್ಲಿಯೇ ತಮ್ಮ ಸರ್ವಸ್ವವನ್ನು ಸಮರ್ಪಿಸುವವರನ್ನೂ,** ಲಿಂಗಪೂಜೆ, ಧ್ಯಾನ, ಸ್ತೋತ್ರ ಇವುಗಳ ವಿನಾ ಅನ್ಯ

ಸುಖಗಳನ್ನೇ ಅರಿಯದಿರುವವರನ್ನೂ, ಲಿಂಗವೇ ತಮ್ಮ ಅಂಗವಾಗಿರುತ್ತಿರುವವರನ್ನೂ, ಲಿಂಗಮೂರ್ತಿಯವಿನಾ ಅನ್ಯ ಯಾವುದರಲ್ಲಿಯೂ ಅಭಿಮಾನವಿಲ್ಲದಿರುವವರನ್ನೂ, ಸಂಗಮೇಶನೇ, ನನಗೆ ತೋರಿಸು. ಅವರೇ ಶಿವಶರಣರು ಅಂಥವರ ಸೇವೆಯು ನನಗೆ ನಿರಂತರದಲ್ಲಿಯೂ ದೊರೆಯುವಂತೆ ಕೃಪೆಮಾಡು."

**(೧೦೫) ಏನಾದರೆಯೂ ಸಾಧಿಸಬಹುದು | ಮತ್ತೇನಾದರೆಯೂ ಸಾಧಿಸಬಹುದಯ್ಯ | ತಾನಾರೆಂಬುದ ಸಾಧಿಸಬಾರದು | ಕೂಡಲಸಂಗಮ ದೇವರ ಕರುಣವುಳ್ಳವಂಗಲ್ಲದೆ ॥** **ಐಕ್ಯಸ್ಥಳ ೮**

**ವಿವರಣೆ-** ಆತ್ಮಜ್ಞಾನವು ಎಲ್ಲಾ ವಿಷಯಗಳ ಜ್ಞಾನಕ್ಕಿಂತಲೂ ಗಳಿಸಲಿಕ್ಕೆ ಅತ್ಯಂತ ಕಠಿಣತರವಾದುದೆಂಬುದನ್ನು ಈ ವಚನದಲ್ಲಿ ವಿವರಿಸಿದ್ದಾರೆ.

"ಧನಧಾನ್ಯಾದಿ ಯಾವ ಸಂಪತ್ತನ್ನು ಎಷ್ಟಾದರೂ ಗಳಿಸಬಹುದು. ನಾನಾ ಲೌಕಿಕ ವಿದ್ಯೆಗಳನ್ನು ಎಷ್ಟಾದರೂ ಕಲಿಯಬಹುದು. ಆದರೆ ಈ ಆತ್ಮನ ನಿಜ ಸ್ಥಿತಿಯನ್ನು ಅರಿತುಕೊಳ್ಳುವುದು ಮಾತ್ರ ಎಂದರೆ ಆತ್ಮಜ್ಞಾನವನ್ನು ಹೊಂದುವುದು ಮಾತ್ರ ಅಸಾಧ್ಯವಾದುದಾಗಿದೆ. ಇದು ಲಿಂಗದೇವನ ಕೃಪೆಯುಳ್ಳ ಮಹಾನುಭಾವರಿಗೆ ಮಾತ್ರ ಸಾಧ್ಯವಾದುದಾಗಿದೆ."

**(೧೦೬) ತನುಮನಧನವೆಂಬ ಮೂರು ಕನ್ನಡಿ ನೋಡಯ್ಯ| ಎನ್ನದೂ ಅಲ್ಲ ನಿನ್ನದೂ ಅಲ್ಲ | ಬರಿಯ ಭ್ರಮೆಯ ಮಾತು | ಆ ಭ್ರಮೆಯೊಳಗಾದೆ ನಿಮ್ಮ ಶ್ರೀ ಚರಣವಬಿಡೆ ಕೂಡಲಸಂಗಮದೇವ||** ಶರಣಸ್ಥಳ ೪೩

**ವಿವರಣೆ-** ಸಕಲರೂ ದುಃಖಿಗಳಾಗಲು ತಮ್ಮ ತನುವಿನ ಭೋಗದಾಶೆ, ಮನಸ್ಸಿನ ಚಾಂಚಲ್ಯ, ಜೀವನ ಅಜ್ಞಾನಗಳೇ ಮುಖ್ಯ ಕಾರಣಗಳಾಗಿವೆ. ಯಾವ ಮಹಾತ್ಮನು ಇವುಗಳಿಂದ ಬಿಡುಗಡೆ ಹೊಂದುತ್ತಾನೋ ಎಂದರೆ ಯಾವ ಜೀವಿಯು ಈ ಭೋಗ ಚಾಂಚಲ್ಯ, ಅಜ್ಞಾನಗಳಿಗೆ ವಶವಾಗಿಲ್ಲವೋ, ಆ ಜೀವಿಯು ಭವಸಾಗರದಲ್ಲಿ ಬಿದ್ದು ಹೊರಳಾಡುವುದಿಲ್ಲ. ಆದಕಾರಣ ಈ ವಚನದಲ್ಲಿ ತನುಮನಧನಗಳ ನಿಜ ವಿವೇಚನೆಯು ಮಾಡಲ್ಪಟ್ಟಿದೆ.

"ಕನ್ನಡಿಯೊಳಗೆ ಯಾರ ರೂಪವೂ ಇರುವುದಿಲ್ಲ. ಆದರೆ ಯಾರು ಕನ್ನಡಿಯನ್ನು ನೋಡುತ್ತಾರೋ ಅವರಿಗೆ ಅವರ ರೂಪವೇ ಆ ಕನ್ನಡಿಯಲ್ಲಿ ತೋರುತ್ತದಷ್ಟೆ. ಈ ತನುಮನಧನಗಳ ಸ್ಥಿತಿಯಾದರೂ ಆ ಕನ್ನಡಿಯಂತೆಯೇ ಇರುತ್ತದೆ. ತನುವನ್ನು ಭೋಗಕ್ಕಾದರೂ ಉಪಯೋಗಿಸಿಕೊಳ್ಳಬಹುದು

ಅಥವಾ ತ್ಯಾಗದಲ್ಲಾದರೂ ವಿನಿಯೋಗಿಸಿಕೊಳ್ಳಬಹುದು. ಮನಸ್ಸಿನ ಚಾಂಚಲ್ಯಕ್ಕಾಗಿ ದುಃಖಿಯಾಗಬಹುದು. ಅಥವಾ ಆ ಮನವನ್ನೇ ಸ್ಥಿರಗೊಳಿಸಿ ನಿಜಾನಂದದಲ್ಲಿ ಮಗ್ನವಾಗಬಹುದು. ಜೀವನು ಅಜ್ಞಾನದಿಂದ ಭವಸಾಗರದಲ್ಲಿ ಬೀಳಬಹುದು, ಅಥವಾ ಶಿವಾದ್ವೈತ ಜ್ಞಾನದಿಂದ ಮೋಕ್ಷಸುಖವನ್ನನುಭವಿಸಬಹುದು. ಆದಕಾರಣ ಈ ತನುಮನಧನಗಳು ಕನ್ನಡಿಯ ಹಾಗೆ ಅವರವರ ಇಷ್ಟವನ್ನು ವ್ಯಕ್ತಗೊಳಿಸತಕ್ಕವುಗಳಾಗಿವೆ. ಇವು ಒಂದೇ ವಿಧವಾದ ಸ್ಥಿತಿಗಳಿಗೆ ಸಂಬಂಧಪಟ್ಟಿವೆಯೆಂಬುದು ಭ್ರಮೆಯ ಮಾತು. ನಾನಾದರೋ ಈ ಭ್ರಮೆಗೊಳಗಾಗಿದ್ದೇನೆ. ಆದಕಾರಣ ಲಿಂಗದೇವನೇ, ನಿನ್ನ ಚರಣವನ್ನು ಹಿಡಿದುಕೊಂಡಿರುವೆನು. ಇನ್ನೆಂದಿಗೂ ಬಿಡೆ."

**(೧೦೭) ಜಗವಸುತ್ತಿಪ್ಪುದು ನಿನ್ನ ಮಾಯೆಯಯ್ಯಾ | ನಿನ್ನ ಸುತ್ತಿಪ್ಪುದು ಎನ್ನ ಮನನೋಡಯ್ಯ | ನೀನು ಜಗಕ್ಕೆ ಬಲ್ಲಿದನು | ಆನು ನಿನಗೆ ಬಲ್ಲಿದನು ಕಂಡಯ್ಯ | ಕರಿಯು ಕನ್ನಡಿಯೊಳಗಡಗಿದಂತಯ್ಯ ಎನ್ನೊಳಗೆ ನೀನಡಗಿದೆ ಕೂಡಲ ಸಂಗಮದೇವ ||** ಶರಣಸ್ಥಳ ೩೦

**ವಿವರಣೆ**- ಪರಮಾತ್ಮನಲ್ಲಿ ಸೇರಲು ಭಕ್ತಿಮಾರ್ಗವು ಒಂದು ಮುಖ್ಯವಾದುದಾಗಿದೆಯಷ್ಟೆ. ಆ ಭಕ್ತಿಯ ಶ್ರವಣಾದಿ ನವವಿಧಗಳು ಕ್ರಮದಿಂದ ಪರಮಾತ್ಮನಿಗೆ ಒಂದಕ್ಕಿಂತ ಒಂದು ಸಮೀಪದವುಗಳಾಗಿವೆ. ಸಖಿತ್ವವೆಂಬ ಭಕ್ತಿಯ ಎಂಟನೆಯ ಅಂತಸ್ತಿಗೆ ಭಕ್ತನು ಬಂದಾಗ ಪರಮಾತ್ಮನ ಸಂಗಡ ಹೇಗೆ ವರ್ತಿಸುತ್ತಾನೆಂಬುದು ಈ ವಚನದಲ್ಲಿ ಬಹು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

"ಲಿಂಗದೇವನೇ, ನಿನ್ನಲ್ಲಿರುವ ಮಾಯೆಯು ಈ ಜಗತ್ತನ್ನೇ ಸುತ್ತಿಕೊಂಡು ಬಿಟ್ಟಿದೆ; ನನ್ನ ಮನಸ್ಸಾದರೋ ನಿನ್ನನ್ನೇ ಸುತ್ತಿಕೊಂಡಿದೆ. ನೀನು ಈ ಜಗತ್ತಿಗೇನೇ ಮಹಾ ಬಲಶಾಲಿಯು; ನಿನ್ನಲ್ಲಿ ಭಕ್ತಿಯುಳ್ಳ ನಾನಾದರೋ ನಿನಗಿಂತಲೂ ಬಲವಂತನು, ಕಂಡೆಯಾ? ಏಕೆಂದರೆ ನೀನು ಭಕ್ತರ ಆಧೀನನಲ್ಲವೆ? ಭಕ್ತರ ಇಷ್ಟದಂತೆ ನೀನು ನಡೆಯಬೇಕಾದುದರಿಂದ ಭಕ್ತರು ನಿನಗಿಂತಲೂ ಬಲಶಾಲಿಗಳಲ್ಲವೇ? ಬಹುದೊಡ್ಡದಾದ ಆನೆಯು ಕೂಡಾ ಒಂದು ಸಣ್ಣ ಕನ್ನಡಿಯಲ್ಲಿ ಪ್ರತಿಬಿಂಬರೂಪದಿಂದ ಹೇಗೆ ಅಡಕವಾಗಿರುತ್ತದೆಯೋ, ಹಾಗೆಯೇ ವಿಶ್ವವ್ಯಾಪಕನಾದ ಲಿಂಗದೇವನೇ, ನೀನು ನನ್ನ ಕಿರಿದಾದ ಮನಸ್ಸಿನಲ್ಲಿಯೇ ಅಡಗಿಕೋ."

**(೧೦೮) ದಶದಿಕ್ಕು ಧರೆ ಗಗನವೆಂಬುದ ನಾನರಿಯೆನಯ್ಯ | ಲಿಂಗ ಮಧ್ಯೆ ಜಗತ್ಸರ್ವಂ ಎಂಬುದ ನಾನರಿಯೆನಯ್ಯ | ಲಿಂಗಸೋಂಕಿನ ಸುಖದೊಳಗೆ ಕೂಡಲ ಸಂಗಮದೇವಯ್ಯ | ಅಂಬುಧಿಯೊಳಗೆ ಬಿದ್ದ ಆಲಿಕಲ್ಲಿನಂತೆ ಭಿನ್ನಭಾವವರಿಯದೆ ಶಿವಶಿವ ಎನುತಿರ್ದೆನು ನಾನು|| ಐಕ್ಯಸ್ಥಳ ೨೮.**

ವಿವರಣೆ- ಪರಮಾತ್ಮನಲ್ಲಿ ಐಕ್ಯನಾಗುವ ಭಗವದ್ಭಕ್ತನ ಭಾವನೆಯು ಈ ವಚನದಲ್ಲಿ ವ್ಯಕ್ತವಾಗುವುದು.

"ಎಂಟು ದಿಕ್ಕುಗಳು ಮತ್ತು ಮೇಲೆ, ಕೆಳಗಿನ ಭಾಗ ಈ ಪ್ರಕಾರ ಹತ್ತು ದಿಕ್ಕುಗಳಲ್ಲಿಯೂ, ಭೂಮಿ ಆಕಾಶಗಳಲ್ಲಿಯೂ ನೀನು ವ್ಯಾಪಿಸಿರುವಿಯೆಂಬುದನ್ನಾಗಲಿ, ಈ ಜಗತ್ತೆಲ್ಲವೂ ಲಿಂಗದೇವನೇ, ನಿನ್ನಲ್ಲಿಯೇ ಇದೆಯೆಂಬುದನ್ನಾಗಲಿ ನಾನರಿಯೆನು. ಸಮುದ್ರದಲ್ಲಿ ಬಿದ್ದ ಆಲಿಕಲ್ಲು ಬೇರೆಯಾಗಿರದೆ ಹೇಗೆ ನೀರಿನಲ್ಲಿಯೇ ಕೂಡಿಹೋಗುತ್ತದೆಯೋ ಹಾಗೆಯೇ ಲಿಂಗಸ್ಪರ್ಶದಿಂದುಂಟಾದ ಸುಖ ಸಮುದ್ರದಲ್ಲಿ ನಾನು ಮುಳುಗಿ ಶಿವಶಿವ ಎನುತ ನಿನ್ನಲ್ಲಿ ಬೆರೆದೆನು. ಸಮುದ್ರದ ಎಂದರೆ ನೀರಿನಿಂದಾದ ಆಲಿಕಲ್ಲು ಕೊನೆಗೆ ಸಮುದ್ರದಲ್ಲಿಯೇ ಬೆರೆತು ಹೋಗುವಂತೆ ಲಿಂಗಮೂರ್ತಿಯಿಂದ ಬಂದ ಅಂಗವೆಂಬ ಜೀವನು ಕೊನೆಗೆ ಲಿಂಗದೊಳಗೇ ಬಯಲಾದನು."

|| ಶಿವೋಹಂ ||

ಓಂ ಶಾಂತಿಃ ಶಾಂತಿಃ ಶಾಂತಿಃ



# ಶ್ರೀರಾಮಕೃಷ್ಣ ಚರಿತಾಮೃತವು

अध्यात्मविद्या विद्यानाम् ।

—गीता

ರಂಗನಾಥ ರಾಮಚಂದ್ರ ದಿವಾಕರ

# ಶ್ರೀರಾಮಕೃಷ್ಣ ಚರಿತಾಮೃತವು

अध्यात्मविद्या विद्यानाम् ।

—गीता

ರಂಗನಾಥ ರಾಮಚಂದ್ರ ದಿವಾಕರ